# ಸೂತ್ರದ ಬೊಂಬೆ

(HENRIK IBSEN'S "DOLL'S HOUSE")

ಎಸ್. ಜಿ. ಶಾಸ್ತ್ರಿ
(ಅನುವಾದಕ)

ಶ್ರೀಮಾನ್
ಬಿ. ಎಂ. ಶ್ರೀಕಂಠಯ್ಯನವರ
ಮುನ್ನುಡಿಯೊಡನೆ.

# ಪೀಠಿಕೆ

ಸೂತ್ರದ ಬೊಂಬೆಯ ಕಥಾನಾಯಿಕೆ ನೋರಾ ಹೆಲ್ಮರ್. ಇವಳು ಮಧ್ಯವಯಸ್ಕಳು. ಮೂರು ಮಕ್ಕಳ ತಾಯಿ. ಅವಳಲ್ಲಿ ಅವಳ ಗಂಡನಿಗೆ ತುಂಬ ಪ್ರೀತಿ; ಅವರದು ಹಾಲಿನಂಥ ಸಂಸಾರ. ಅನೇಕ ವರ್ಷಗಳು ಬಡತನದಲ್ಲಿದ್ದು ಕೊನೆಗೆ ಅನುಕೂಲ ಸ್ಥಿತಿಗೆ ಬಂದು ಬ್ಯಾಂಕಿನ (Bank Manager) ಮುಖ್ಯಾಧಿಕಾರವು ಗಂಡನಾದ ತೊರ್ವಾಲ್ಡ್ ಹೆಲ್ಮರನಿಗೆ ದೊರಕಿದೆ. ಒಂದು ವಾರದೊಳಗೆ–ಎಂದರೆ ವರ್ಷದ ಪ್ರಾರಂಭದಲ್ಲಿ-ಕೆಲಸದ ಜವಾಬ್ದಾರಿಯನ್ನು ವಹಿಸಿಕೊಳ್ಳಬೇಕು. ಅನೇಕ ವರ್ಷಗಳು ಪಟ್ಟ ಕಷ್ಟಗಳು ಮುಗಿದ ಮೇಲೆ ದೊರೆತಿರುವ ಗೌರವಯುಕ್ತವಾದ ನೌಕರಿಯಿಂದ ನಿಶ್ಚಿಂತೆಯಾಗಿಯೂ ಸುಖವಾಗಿಯೂ ಕಾರ್ಪಣ್ಯವಿಲ್ಲದೆ ಸಂಸಾರವನ್ನು ನಡೆಯಿಸಬಹುದೆಂಬ ಉತ್ಸಾಹವೂ ಸಂತೋಷವೂ ಗಂಡಹೆಂಡರಿಬ್ಬರಲ್ಲೂ ತುಂಬಿತುಳುಕುತ್ತಿದೆ. ಕ್ರಿಸ್‌ಮಸ್ ಹಬ್ಬವು ಮರುದಿನವೇ ಆದ್ದರಿಂದ ಅದರ ಸಂಭ್ರಮ ಬೇರೆ. ಸಂತೋಷದಮೇಲೆ ಸಂತೋಷ! ಕಥೆಯು ಪ್ರಾರಂಭವಾಗುವಾಗ್ಗೆ ನೋರಾ ಹೆಲ್ಮರ್ ಅಂಗಡಿಯಿಂದ ಹಬ್ಬಕ್ಕೆ ಅಣಿಮಾಡಬೇಕಾದ ಸಾಮಾನುಗಳನ್ನೂ ಮಕ್ಕಳಿಗೆ ಆಟದ ಸಾಮಾನುಗಳನ್ನೂ ಗಂಡ ಮತ್ತು ಸ್ನೇಹಿತರು ಇವರೆಲ್ಲರಿಗೂ ಉಡುಗೊರೆಗಳನ್ನೂ ಪೇಟೆಯಲ್ಲಿ ಕೊಂಡುಕೊಂಡು ಮನೆಗೆ ಬಂದಿರುವಳು. ಮನಸ್ಸಿನ ಉಲ್ಲಾಸದಿಂದ ತನ್ನಲ್ಲಿ ತಾನೇ ಹಾಡನ್ನು ಕುರುಕಿಕೊಳ್ಳುತ್ತಿರುವಳು. ಗಂಡನೂ ಕೂಡ ಎಲ್ಲವನ್ನೂ ನೋಡಿ ಸರಸಸಲ್ಲಾಪಗಳಿಂದೊಡಗೂಡಿ ಹೆಂಡತಿಯನ್ನು "ನನ್ನ ಪುಟ್ಟಹಕ್ಕಿ"–"ನನ್ನ ಪುಟ್ಟ ಅಳಿಲು"–"ನನ್ನ ಪುಟ್ಟ ದುಂದುಗಾತಿ" ಇತ್ಯಾದಿಯಾಗಿ ಪ್ರೀತಿಯಿಂದ ಕರೆಯುತ್ತಾ ತನ್ನ ಪ್ರೇಮವನ್ನು ತೋರಿಸುವನು—ಈ ಸಂಸಾರದ ಚೆನ್ನೇಚೆನ್ನು—ಇಂತಹ ಸಂಸಾರವನ್ನು ಇನ್ನು ಎಲ್ಲಿ ನೋಡುವುದು? ಎಂತಹ ಅನುಕೂಲ ದಾಂಪತ್ಯ!—ಎಂದೆಲ್ಲರೂ ಆಡಿಕೊಳ್ಳುವ ಹಾಗಿತ್ತು.

ಇಂತಹ ಸಂಸಾರದಲ್ಲಿ ಕುಂದುಕೊರತೆಗಳೆಂದರೆ ನಂಬುವುದು ಕಷ್ಟ. ಆದಾಗ್ಯೂ ಎರಡು ದಿನಗಳ ಒಳಗಾಗಿ ಈ ಸಂಸಾರವು ಒಡೆದು ಚೂರುಚೂರಾಗಿ ಹೋಯಿತು! ತನ್ನ ಮನೆ ಮಠ, ಹೊತ್ತುಹೆತ್ತು ಸಾಕಿದ ಮೂರು ಮಕ್ಕಳು, ಕೈಹಿಡಿದ ಗಂಡ—ಈ ಸಂಸಾರ ಸರ್ವಸ್ವವನ್ನೂ ತೊರೆದು ನೋರಾ ಹೆಲ್ಮರ್ ಹೊರಟು ಹೋಗುತ್ತಾಳೆ. ತನ್ನ ಮನಸ್ಸಿನಲ್ಲಿರುವುದನ್ನೆಲ್ಲಾ ಯಥಾರ್ಥ ವಾಗಿ ಗಂಡನಿಗೆ ತಿಳಿಸಿ, ಮನೆಬಿಟ್ಟು ಹೋಗುವುದಕ್ಕೆ ಕಾರಣಗಳ ನ್ನೆಲ್ಲಾ ವಿಶದವಾಗಿ ನಿರ್ವಂಚನೆಯಾಗಿ ಹೇಳಿ ಮಲಗಿ ನಿದ್ದೆಮಾಡು ತ್ತಿರುವ ಮಕ್ಕಳನ್ನೂ ಕೂಡ ಇನ್ನೊಮ್ಮೆ ನೋಡದೆ ನಡುರಾತ್ರಿ ಯಲ್ಲಿ ತನ್ನ ಸಂಸಾರ ತ್ಯಾಗಮಾಡಿ ಹೋಗುವಳು. "ಇವಳೇಕೆ ಹೀಗೆ ಮಾಡಿದಳು?" ಎಂಬುದಕ್ಕೆ ಉತ್ತರವು ನಾಟಕಾಂತರ್ಗತ ವಾದ ಕತೆಯಲ್ಲಿದೆ. "ಹೀಗೆ ಮಾಡಬಹುದೆ? ಈ ನಡತೆಯು ಸರಿಯೆ? ಅಥವಾ ತಪ್ಪೆ?" ಎಂಬುದಕ್ಕೆ ಉತ್ತರವನ್ನು ನಾಟಕ ವನ್ನು ಓದಿದವರು ಅಥವಾ ನೋಡಿದವರು ಹೇಳಬೇಕು.

ನೋರಾಳ ಬಾಲ್ಯದ ವಿಷಯವೇನೂ ನಮಗೆ ಗೊತ್ತಿಲ್ಲ. ಅವಳ ತಂದೆತಾಯಿಗಳ ವಿಷಯವೂ ಚೆನ್ನಾಗಿ ತಿಳಿಯದು. ತಂದೆಯ ಪ್ರಸ್ತಾಪವೇನೋ ನಾಟಕದಲ್ಲಿ ಬರುತ್ತದೆ. ಆದರೆ ನಾಟಕದಲ್ಲಿರುವ ಸಂದರ್ಭಗಳಿಗಿಂತಲೂ ಮುಂಚಿತವಾಗಿಯೇ ಅವನು ಸತ್ತುಹೋಗಿ ರುವನು.

ತೊರ್ವಾಲ್ಡ್ ಹೆಲ್ಮರ್ ಒಬ್ಬ ಲಾಯರ್. ಆ ಕಸಬಿನಿಂದ ಅವ ನಿಗೆ ಸಾಕಾದಷ್ಟು ಹಣ ಸಂಪಾದನೆಯಾಗುತ್ತಿರಲಿಲ್ಲ. ಸಂಶಯಾಸ್ಪ ದರಾದ ಕಕ್ಷಿಗಾರರನ್ನು ಹತ್ತಿರ ಸೇರಿಸದೇ ಹೋದುದೇ ಅದಕ್ಕೆ ಕಾರಣ. ಕೊನೆಗೆ ಒಂದು ಸಣ್ಣ ನೌಕರಿಗೆ ಸೇರಿ ಬಂದ ಸ್ವಲ್ಪ ಸಂಬಳದಲ್ಲೇ ಜೀವನವನ್ನು ನಡೆಯಿಸುತ್ತಿದ್ದನು. ಆ ಸಮಯ ದಲ್ಲಿ ಮದುವೆ ಮಾಡಿಕೊಂಡನು. ಮದುವೆಯಾದೊಡನೆ ತೊರ್ವಾ ಲ್ಡನು 'ಆಫೀಸಿನ ಕೆಲಸವನ್ನು ಬಿಟ್ಟನು: ಏಕೆಂದರೆ ಮೊದಲಿ ಗಿಂತಲೂ ಹೆಚ್ಚಾಗಿ ಹಣವನ್ನು ಸಂಪಾದಿಸಬೇಕಾಗಿ ಬಂತು; ಮತ್ತು

ಆಫೀಸಿನಲ್ಲಿ ಸಂಬಳ ಬಡ್ತಿಯಾಗುವ ಸಂಭವವು ದೂರವಾಗಿತ್ತು. ಮದುವೆಯಾದ ವರ್ಷ ತನ್ನ ಶಕ್ತಿಮೀರಿ ಕೆಲಸಮಾಡಿದನು. ಏನಾದರೂ ಮಾಡಿ ಹೆಚ್ಚು ಹಣವನ್ನು ಸಂಪಾದಿಸಬೇಕಾಗಿ ಬಂತು. ಆದ್ದರಿಂದ ಹಗಲು ರಾತ್ರಿಯೆಂಬ ಪರಿಜ್ಞಾನವಿಲ್ಲದೆ ಕೆಲಸಮಾಡ ತೊಡಗಿದನು. ಖಾಯಿಲೆ ಬಿದ್ದನು. ವೈದ್ಯರು ಬಂದು ಪರೀಕ್ಷಿಮಾಡಿ ಉಷ್ಣ ದೇಶಗಳ ಕಡೆ ಹವ ಬದಲಾಯಿಸುವುದಕ್ಕೋಸ್ಕರ ಹೋಗಲೇಬೇಕೆಂದೂ ಇಲ್ಲವಾದರೆ ಪ್ರಾಣಭಯವುಂಟೆಂದೂ ಹೇಳಿದರು. ಆ ಸಮಯದಲ್ಲಿ ನೋರಾವಿಗೆ ಹೆರಿಗೆಯ ಕಾಲ. ನೋರಾವಿನ ತಂದೆಗೂ ಬಹಳ ಖಾಯಿಲೆ. ಗಂಡನ ಸ್ಥಿತಿ ಬೇರೆ ಹೀಗಾಯಿತು. ಕಷ್ಟದಮೇಲೆ ಕಷ್ಟ. ಆಗ್ಗೆ ಮನಸ್ಸಿಗೆ ಧೈರ್ಯವನ್ನು ತಂದುಕೊಂಡು ನೋರಾ ಇನ್ನೂರ ಐವತ್ತು ಪೌಂಡುಗಳನ್ನು ಸಾಲಮಾಡಬೇಕಾಗಿ ಬಂತು. ಕ್ರಾಗ್‌ಸ್ಟಾಡ್ ಎಂಬ ಒಬ್ಬ ಲಾಯರು. ಅವನು ಅಷ್ಟು ಗಣ್ಯನಾದ ಮನುಷ್ಯನಲ್ಲ. ಏನೋ ಒಂದು ಕೆಟ್ಟಕೆಲಸವನ್ನು ಮಾಡಿ ಉಪಾಯಾಂತರಗಳಿಂದ ಶಿಕ್ಷೆಯಿಂದ ತಪ್ಪಿಸಿಕೊಂಡು ಒಂದು ಬ್ಯಾಂಕಿನಲ್ಲಿ ಒಂದು ಸಣ್ಣ ನೌಕರಿಯಲ್ಲಿದ್ದುಕೊಂಡು ಕಳೆದುಕೊಂಡ ಮಾನವನ್ನು ಪುನಃ ಸಂಪಾದಿಸಿಕೊಳ್ಳಬೇಕೆಂದು ಅವನು ಪ್ರಯತ್ನಪಡುತ್ತಿದ್ದನು. ಆದರೂ ಅವನ ಸ್ವಭಾವ ನೀಚವಾದದ್ದು. ಇವನ ಸ್ವಭಾವವು ತೊರ್ವಾಲ್ಡ್ ಹೆಲ್ಮರ್‌ಗೆ ಚಿಕ್ಕಂದಿನಿಂದಲೂ ಚೆನ್ನಾಗಿ ಗೊತ್ತು. ಆ ತುರತು ಸಮಯದಲ್ಲಿ ಮತ್ಯಾರೂ ದೊರಕದೆ ಆ ನೀಚನಾದ ಕ್ರಾಗ್‌ಸ್ಟಾಡನಲ್ಲಿ ಸಾಲ ತೆಗೆಯಲು ನೋರಾ ಹೋದಳು. ಅವಳ ತಂದೆಯೂ ಜಾಮೀನಾಗಿ ನಿಂತು ಪತ್ರಕ್ಕೆ ರುಜು ಮಾಡಿದರೆ ಹಣವನ್ನು ಕೊಡುತ್ತೇನೆಂದು ಕ್ರಾಗ್‌ಸ್ಟಾಡ್ ಹೇಳಿದ್ದಕ್ಕೆ ನೋರಾ ಒಪ್ಪಿ ಹಣವನ್ನು ಪಡೆಯುವಳು. ಆ ಹಣದ ಸಹಾಯದಿಂದ ಗಂಡನ ಪ್ರಾಣವನ್ನು ಉಳಿಸಿಕೊಳ್ಳುವಳು. ಸಾಲ ತೆಗೆದಿರುವುದು ಹೆಲ್ಮರ್‌ಗೆ ಗೊತ್ತಿಲ್ಲ. ತನ್ನ ಮಾವನು ಹಣವನ್ನು ಕೊಟ್ಟಿರಬೇಕೆಂದು ಅವನು ನಂಬಿದ್ದನು. ಗಂಡನಿಗೆ ಸಾಲದ ವಿಚಾರವನ್ನು ಹೇಳದೇ ನೋರಾ ಅವಕಾಶವಾದಾಗ್ಗೆ ಚಿಲ್ಲರೆಪಲ್ಲರೆ ಕೆಲಸಗಳನ್ನು ಗುಟ್ಟಾಗಿ ಮಾಡಿ ಅಲ್ಪಸ್ವಲ್ಪ ಹಣವನ್ನು ಸಂಪಾದಿಸಿ ಮತ್ತು ಸಂಸಾರದ ಖರ್ಚಿಗೋ

ಸ್ಕರ ಕೊಟ್ಟ ಹಣದಲ್ಲಿ ಏನಾದರೂ ಸ್ವಲ್ಪ ಉಳಿಸಿಕೊಂಡು—ಕ್ರಾಗ್‌ಸ್ಟಾಡ್‌ಗೆ ಅಸಲು ಬಡ್ಡಿಗೋಸ್ಕರ ಹಣವನ್ನು ಕೊಂಚಕೊಂಚವಾಗಿ ಪಾವತಿ ಮಾಡುತ್ತಿದ್ದಳು.

ತೊರ್ವಾಲ್ಡ್ ಹೆಲ್ಮರ್ ತನಗೆ ಬ್ಯಾಂಕಿನ ಮ್ಯಾನೇಜರ್ ಕೆಲಸವಾದೊಡನೆ ನೀಚಸ್ವಭಾವವುಳ್ಳ ಕ್ರಾಗ್‌ಸ್ಟಾಡನನ್ನು ನೌಕರಿಯಿಂದ ತೆಗೆದುಹಾಕಲು ನಿಶ್ಚಯಿಸುವನು. ಇದನ್ನು ತಿಳಿದು ಕ್ರಾಗ್‌ಸ್ಟಾಡ್ ಗುಟ್ಟಾಗಿ ನೋರಾಳ ಹತ್ತಿರ ಬಂದು ಅವಳು ತನ್ನ ದಾಕ್ಷಿಣ್ಯವನ್ನು ಉಪಯೋಗಿಸಿ ತನ್ನ ಪರವಾಗಿ ಮಾತನ್ನಾಡಿ ತೊರ್ವಾಲ್ಡ್ ಹೆಲ್ಮರನ ಉದ್ದೇಶವು ನೆರವೇರದಂತೆ ಮಾಡಬೇಕೆಂದು ಅವಳನ್ನು ಪ್ರೇರೇಪಿಸುವನು. ಆದಕ್ಕೆ ಅವಳು ಒಪ್ಪುವುದಿಲ್ಲ. ತಾನು ಹೇಳಿದಹಾಗೆ ಮಾಡದಿದ್ದರೆ ಅನೇಕ ಕಷ್ಟಗಳು ಅವಳಿಗೆ ಒದಗಬಹುದೆಂದು ಸೂಚಿಸಿ, ಅವಳು ಮಾಡಿರುವ ಒಂದು ದೊಡ್ಡ ತಪ್ಪು ಕೆಲಸವನ್ನು ಅವಳ ಗಂಡನಿಗೆ ತಿಳಿಸುವುದಾಗಿ ಹೆದರಿಸುವನು. ತಾನೇನೂ ಅಂತಹ ಕೆಟ್ಟ ಕೆಲಸವನ್ನು ಮಾಡಿಲ್ಲವೆಂದು ತಿಳಿದುಕೊಂಡು ಪ್ರಾರಂಭದಲ್ಲಿ ಕೊಂಚವೂ ಹೆದರದೆ ನೋರಾ ಕ್ರಾಗ್‌ಸ್ಟಾಡನನ್ನು ತಿರಸ್ಕರಿಸುವಳು. ಸಾಲ ತೆಗೆಯುವ ಕಾಲದಲ್ಲಿ ಪೂರ್ವಾಪರ ಜ್ಞಾನವಿಲ್ಲದೆ ಕೊಂಚವೂ ವಿವೇಚನೆಯಿಲ್ಲದೆ ಸಾಲದಪತ್ರಕ್ಕೆ ಅವಳು ತನ್ನ ತಂದೆಯ ರುಜುವನ್ನೂ ತಾನೇ ಹಾಕಿರುವುದನ್ನು ನೋರಾಳ ನೆನಪಿಗೆತಂದು ಆ ವಿಷಯವು ಪತ್ತೆಯಾದರೆ ಘೋರವಾದ ಶಿಕ್ಷೆಯಾಗುವುದೆಂಬ ಅಂಶವನ್ನು ಕ್ರಾಗ್‌ಸ್ಟಾಡ್ ನೋರಾಳಿಗೆ ತಿಳಿಸುವನು. ಕ್ರಾಗ್‌ಸ್ಟಾಡ್ ಪರವಾಗಿ ಗಂಡನೊಡನೆ ಮಾತಾಡಲು ನೋರಾ ಒಪ್ಪುವಳು; ಸಮಯ ವೊದಗಿದಾಗ ಮಾತಾಡುವಳು. ಆದರೆ ಆ ಮಾತುಗಳು ನಿಷ್ಫಲಗಳಾಗುವುವು. ಕ್ರಾಗ್‌ಸ್ಟಾಡ್‌ನ ಆಶಾಭಂಗವಾಗುವುದು. ಅವನು ಕೋಪದಿಂದ ತೊರ್ವಾಲ್ಡ್ ಹೆಲ್ಮರನಿಗೆ ಅವನ ಹೆಂಡತಿ ಮಾಡಿರುವ ಮಹಾಪರಾಧವನ್ನು ತಿಳಿಸುವನು. ಹೆಲ್ಮರನು ತನ್ನ ಹೆಂಡತಿಯ ತಪ್ಪಿನಿಂದ ತನಗೆ ಆಗುವ ಅವಮಾನವನ್ನು ಮಾತ್ರ ಯೋಚಿಸುತ್ತಾ ಕೋಪಪರವಶನಾಗಿ ಇನ್ನುಮುಂದೆ ಸಂಸಾರದಲ್ಲಿ

ತಿರಸ್ಕೃತಳಾಗಿ ಮಕ್ಕಳ ಸಂಪರ್ಕವೂ ಇಲ್ಲದೆ ಯಾವ ರೀತಿಯಲ್ಲಿ ಅವಳು ನಡೆದುಕೊಂಡು ಇರಬೇಕೆಂಬ ವಿಧಾನವನ್ನು ತಿಳಿಸುವನು. ತಾನು ಏತಕ್ಕೋಸ್ಕರ ತಪ್ಪುಕೆಲಸ ಮಾಡಬೇಕಾಗಿ ಬಂತು, ಸಮಯವೆಂಥಾದ್ದು, ಹಣ ಒದಗದಿದ್ದರೆ ಗಂಡನ ಪ್ರಾಣವೇ ಹೋಗುತ್ತಿದ್ದ ಸಂದರ್ಭ, ತಂದೆಯು ಖಾಯಲೆಯಿಂದ ಪ್ರಾಣಹೋಗುವ ಕಾಲ, ತನ್ನ ಹೆರಿಗೆ ಕಾಲ—ಇವುಗಳನ್ನೆಲ್ಲಾ ನೋರಾ ಎಷ್ಟು ವರ್ಣಿಸಿ ಹೇಳಿದರೂ ತೊರ್ವಾಲ್ಡ್ ಹೆಲ್ಮರನಿಗೆ ಮನಸ್ಸಿಗೆ ಅಂಟದೆ ಸಮಾಜದಲ್ಲಿ ತನ್ನ ಗೌರವಕ್ಕೆ ಎಲ್ಲಿ ಕುಂದುಕೊರತೆಗಳು ಬರುವುವೋ ಎಂಬ ಒಂದು ಯೋಚನೆಯಿಂದಲೇ ನೋರಾವನ್ನು ತುಚ್ಛವಾಗಿ ಗಣಿಸಿ ನಿಂದಿಸುವನು. ದೈವವಶಾತ್ ಆ ಕ್ಷಣದಲ್ಲಿ ಕ್ರಾಗ್ಸ್ಟಾಡ್ ಯಾವುದೋ ಒಂದು ಒಳ್ಳೆಯ ಪ್ರೇರಣೆಯಿಂದ ಸಾಲಪತ್ರವನ್ನು ವಾಪಸ್ಸು ಮಾಡುವನು. ಹೆಲ್ಮರನು ಸಂತೋಷಯುಕ್ತನಾಗಿ ಪತ್ರವನ್ನು ಚೂರು ಚೂರುಮಾಡಿ ಸುಟ್ಟು ಬೂದಿಮಾಡುವನು. ಸಾಲದ ಪತ್ರದ ಭಯವು ಮಾಯವಾದೊಡನೆ ನೋರಾವಿನೊಡನೆ ಪೂರ್ವದಂತೆ ಪ್ರೀತಿಯನ್ನು ತೋರಿಸಲು ಪ್ರಾರಂಭಿಸುವನು. ನೋರಾವಿಗೆ ಮನಸ್ಸಿಗೆ ಜುಗುಪ್ಸೆಯಾಗುವುದು. ಗಂಡನನ್ನು ಹತ್ತಿರ ಸೇರಿಸದೆ ಪ್ರಪಂಚದಲ್ಲಿ ಗಂಡಹೆಂಡಿರ ಅನ್ಯೋನ್ಯಸಂಬಂಧ—ಅವರವರಿಗೆ ಇರುವ ಹಕ್ಕುಬಾಧ್ಯತೆ—ಕರ್ತವ್ಯಗಳು—ಸಮಾಜದಲ್ಲಿ ಹೆಂಗಸಿನ ಪರಾಧೀನತೆ—ಇವುಗಳ ವಿಷಯವಾಗಿ ಒಂದು ಸಣ್ಣ ಚರ್ಚೆಯನ್ನು ಹೂಡಿ ತನ್ನ ಮನಸ್ಸಿನಲ್ಲಿರುವ ಅಭಿಪ್ರಾಯಗಳನ್ನು ಕೂಲಂಕುಷವಾಗಿ ತಿಳಿಸಿ—ಯಾವಜ್ಜೀವವೂ—ಪ್ರತಿ ಕ್ಷಣದಲ್ಲೂ ಕೇವಲ ಆತ್ಮಾವಲಂಬಿಯಾದ—ಹೆಂಗಸರನ್ನು ಕೇವಲ ಕಾಮುಪ್ರದಾಯಿಕ ಸೂತ್ರದ ಬೊಂಬೆಗಳೆಂದು ನಂಬಿರುವ—ಸ್ವಾರ್ಥಪರನಾದ ಗಂಡನನ್ನು ಬಿಟ್ಟು ದೇವರಮೇಲೆ ಭಾರವನ್ನಿಟ್ಟು ತನ್ನ ಸಂಸಾರವನ್ನು ತ್ಯಾಗಮಾಡಿ ಸತ್ಯಾನ್ವೇಷಿಣಿಯಾಗಿ ನಡುರಾತ್ರಿಯಲ್ಲಿ ಮನೆಬಿಟ್ಟು ಹೋಗುವಳು.

ಕತೆಯ ಸಾರಾಂಶವನ್ನು ಸೂಕ್ಷ್ಮವಾಗಿ ಸೂಚಿಸಿದ್ದಾಯಿತು. ಬಾಕಿ ಪಾತ್ರಗಳ ಪರಸ್ಪರ ಸಂಬಂಧವನ್ನು ವರ್ಣಿಸಿ ಕತೆಯನ್ನು

ವಿಸ್ತರಿಸುವುದು ಅನುಚಿತ. ಕತೆಯ ಸ್ವಾರಸ್ಯವನ್ನು ವಾಚಕರೇ ಓದಿ ತಿಳಿಯಬೇಕು.

ಈ ನಾಟಕದಲ್ಲಿ ಇಬ್ಸನ್ ಕವಿಯು ಸಾಮಾಜಿಕ ಸಂಬಂಧವಾದ ಅನೇಕ ಸಮಸ್ಯೆಗಳನ್ನು ಬಹಳ ಚಮತ್ಕಾರದಿಂದ ಹೂಡಿದ್ದಾನೆ. ಪಾತ್ರರಚನೆ, ನಾಟಕಸಂವಿಧಾನ, ಪಾತ್ರಗಳ ನಡೆನುಡಿಗಳ|ಹೊಂದಾವಣೆ ಇವುಗಳೆಲ್ಲವೂ ಕವಿಯ ಕಲಾಕೌಶಲ್ಯವನ್ನು ತೋರಿಸುತ್ತವೆ. ಪಾತ್ರಗಳ ಯಾವ ಕ್ರಿಯೆಯೂ ಸ್ವಭಾವವಿರುದ್ಧವಾಗಿ ಕಾಣುವುದಿಲ್ಲ. ನಾಟಕದಲ್ಲಿ ಗರ್ಭಿತವಾಗಿರುವ ಸಮಸ್ಯೆಗಳಲ್ಲಿ ಮುಖ್ಯವಾದುವುಗಳು ಎರಡು—ಹೆಂಗಸು ಗಂಡಸಿನ ಕೇವಲ ಆಟದ ಬೊಂಬೆಯೊ? ಸಮಾಜದಲ್ಲಿ ಅವಳಿಗೂ ಹಕ್ಕುಬಾಧ್ಯತೆ ಸ್ವಾತಂತ್ರ್ಯಗಳಿರಬೇಕೊ ಇಲ್ಲವೊ? ಎಂಬುದು ಮೊದಲನೆಯದು. ಅಂದರೆ ಸಮಾಜದಲ್ಲಿ ಈಗ ನಾವು ಸ್ತ್ರೀಯರಿಗೆ ಕೊಟ್ಟಿರುವ ಸ್ಥಾನವು ಸರಿಯಾದದ್ದೆ? ನ್ಯಾಯವಾದದ್ದೆ? ಇದುವರೆಗೂ ಗಂಡಸರು ಸ್ತ್ರೀಯರನ್ನು ಸ್ವಲ್ಪ ಹೆಚ್ಚುಕಡಿಮೆ ಕೀಳುದೆಸೆಯಲ್ಲಿಟ್ಟಿಲ್ಲವೆ? ಆ ಕೀಳು ದೆಸೆಯಲ್ಲಿಯೇ ಇಟ್ಟಿರಲು ಅನುಕೂಲವಾಗುವಂತೆ ಗಂಡಸು ಕಟ್ಟಳೆ ನಿಯಮ ಸಂಪ್ರದಾಯಗಳನ್ನು ಸೃಷ್ಟಿಸಿಕೊಂಡು ಅವುಗಳನ್ನು ಆದರದಿಂದ ಕಾಪಾಡಿಕೊಂಡು ಬಂದಿಲ್ಲವೆ? ಗಂಡಸೇ ಮುಖ್ಯ, ಹೆಂಗಸು ಅಮುಖ್ಯ, ಎಂಬ ಭಾವನೆಯನ್ನು ಹೂಡಿ ಹೆಂಗಸರನ್ನು ಮೆಟ್ಟಿತುಳಿದು ಗಂಡಸಿನ ಕೈಕೆಳಗೆ ಸರ್ವದಾ ಇಟ್ಟುಕೊಂಡಿಲ್ಲವೆ? ಇತ್ಯಾದಿಯಾಗಿ ಅನೇಕ ಪ್ರಶ್ನೆಗಳು ಮನಸ್ಸಿಗೆ ಈ ನಾಟಕವನ್ನು ಓದುವುದರಿಂದ ಹೊಳೆಯುತ್ತವೆ. ಎರಡನೆ ಸಮಸ್ಯೆಯೇನೆಂದರೆ ರಾಜಶಾಸನಗಳು (Laws) ಒಟ್ಟಿನಲ್ಲಿ ಒಪ್ಪತಕ್ಕವುಗಳಾದರೂ ಕೆಲವು ಸಂದರ್ಭಗಳಲ್ಲಿ ಶಾಸನ ಸಮ್ಮತವಾದ ಶಿಕ್ಷೆಗಳನ್ನು ಕೊಡಲಾಗುವುದಿಲ್ಲ. ಕೆಲವುವೇಳೆ ಶಾಸನರೀತ್ಯಾ ತಪ್ಪುಮಾಡಿದ್ದರೂ ಆ ತಪ್ಪುಗಳು ಧರ್ಮದೃಷ್ಟಿಯಲ್ಲಿಯೂ ಮತ್ತು ನೀತಿಮಾರ್ಗದಲ್ಲಿಯೂ ತಪ್ಪುಗಳಾಗಿ ಕಾಣುವುದಿಲ್ಲ. ಆ ಸಂದರ್ಭದಲ್ಲಿ ತಪ್ಪಿತಸ್ಥನಿಗೆ ಶಿಕ್ಷೆಯನ್ನು ಕೊಡಕೂಡದು ಎಂದು ತೋರುವುದು. ನಾಟಕದಲ್ಲಿ ಕಥಾನಾಯಿಕೆ ನೋರಾ ಹೆಲ್ಮರ್

ಸಾಲದ ಪತ್ರಕ್ಕೆ ತನ್ನ ತಂದೆಯ ಸಹಿಯನ್ನು ತಾನು ಹಾಕುವಳು. ಇದು ಶಾಸನರೀತ್ಯಾ ತಪ್ಪು. (Forgery !) ಆದರೆ ಆಗ್ಗೆ ಒದಗಿದ ಸಂದರ್ಭಗಳನ್ನು ನೋಡಿದರೆ ನೋರಾ ತಪ್ಪಿತಸ್ಥಳೆಂದು ಧರ್ಮವನ್ನರಿತವರು ಹೇಳಲಾಗುವದಿಲ್ಲ. ಗಂಡನಿಗೆ ಬಹಳ ಖಾಯಿಲೆ, ಅವನ ಚಿಕಿತ್ಸೆಗೆ ಮತ್ತು ಹವಾ ಬದಲಾಯಿಸುವುದಕ್ಕೆ ಹಣ ದೊರೆಕಿಸಬೇಕು. ಆಗ್ಗೆ ನೋರಾ ದಿನತುಂಬಿದ ಗರ್ಭಿಣಿ. ಕಡ ಕೊಡುವವನು ಪತ್ರಕ್ಕೆ ತಂದೆಯ ಜಾಮೀನು ಬೇಕೆಂದು ನೋರಾಗೆ ಹೇಳುವನು. ನೋರಾ ಒಪ್ಪುವಳು. ಒಪ್ಪುವ ಸಮಯದಲ್ಲಿ ಅವಳಿಗೆ ತಂದೆಯು ಜಾಮೀನಿಗೋಸ್ಕರ ರುಜು ಖಂಡಿತವಾಗಿಯೂ ಹಾಕಿಕೊಡುವನೆಂಬ ಧೈರ್ಯವಿತ್ತು. ಆದರೆ ಮಾತು ಕೊಟ್ಟಾದಮೇಲೆ ತನ್ನ ತಂದೆಯು ವ್ಯಾಧಿಗ್ರಸ್ತನಾಗಿ ಕಾಲಾಧೀನನಾಗುವ ಸ್ಥಿತಿಯಲ್ಲಿದ್ದಾನೆಂದು ಗೊತ್ತಾಯಿತು. ಸಾಯುವ ಸಮಯದಲ್ಲಿ ಹೆತ್ತ ತಂದೆಯ ಮನಸ್ಸನ್ನು ತನ್ನ ಕಷ್ಟಗಳನ್ನು ಹೇಳಿಕೊಂಡು ನೋಯಿಸುವುದು ತಪ್ಪೆಂದು ದೃಢವಾಗಿ ನಂಬಿ ತಂದೆಗೆ ಸಾಲದ ವಿಷಯವನ್ನೇ ನೋರಾ ಹೇಳುವುದಿಲ್ಲ. ತಂದೆಯು ದೈವಾಧೀನನಾಗುವನು. ಮೊದಲೇ ಒದಗಿದ್ದ ಕಷ್ಟಗಳ ಜೊತೆಗೆ ಮತ್ತೊಂದು ದುಃಖ; ಮತ್ತು ತಂದೆಯ ರುಜುವಿಲ್ಲದೇ ಸಾಲವು ದೊರೆಯದಿರುವ ಸಂಘಟನೆ ಇವುಗಳೂ ಒದಗಿದವು. ಗಂಡನ ಪ್ರಾಣವನ್ನು ಉಳಿಸುವುದಕ್ಕೋಸ್ಕರ ಹಣವು ಸಿದ್ಧವಾಗಬೇಕಾದ್ದರಿಂದ ತದೇಕ ಮನಸ್ಕಳಾಗಿ ವಿವೇಚನರಹಿತಳಾಗಿ ತಂದೆಯ ರುಜುವನ್ನು ಸಾಲಪತ್ರಕ್ಕೆ ತಾನೇ ಮಾಡುವಳು. ಹಾಗೆ ಮಾಡುವಾಗ್ಗೆ ಅವಳಿಗೆ ಯಾರಿಗೂ ಮೋಸ ಮಾಡಬೇಕೆಂಬ ಬುದ್ಧಿಯೇನೂ ಇರಲಿಲ್ಲ. ಹಣವನ್ನು ತನ್ನ ತಂದೆ ಸಾಯುವುದಕ್ಕೆ ಮುಂಚೆ ತನಗೆ ಕೊಟ್ಟಿದ್ದನೆಂಬ ನಂಬಿಕೆಯನ್ನು ಗಂಡನಲ್ಲಿ ಹುಟ್ಟಿಸಿ ನೋರಾ ಸಾಲವನ್ನು ಮಾತ್ರ ಗುಟ್ಟಾಗಿ ಕಂತಿನ ಮೇಲೆ ಪಾವತಿಮಾಡುತ್ತಿದ್ದಳು. ಅವಳ ಉದ್ದೇಶವೇನೆಂದರೆ ಪತಿಗೋಸ್ಕರ ಒಂದು ಮಹತ್ಕಾರ್ಯವನ್ನು ಮಾಡಿದೆನೆಂಬ ತೃಪ್ತಿ ಮಾತ್ರ. ಈ ಮಹತ್ಕಾರ್ಯವನ್ನು ಮಾಡಿದ್ದು ಬಾಹ್ಯಾಡಂಬರಕ್ಕೂ ಸಮಾಜದಲ್ಲಿ

ಸಮಾನಸ್ಕಂಧರೊಡನೆ ಹೆಮ್ಮೆ ಕೊಚ್ಚಿಕೊಳ್ಳುವುದಕ್ಕೂ ಅಲ್ಲ ಕೇವಲ ಆತ್ಮತೃಪ್ತಿಗೋಸ್ಕರವೇ.

ಧರ್ಮದೃಷ್ಟಿಯಿಂದ ನೋಡಿದರೆ ನೋರಾ ತಪ್ಪಿತಸ್ಥಳಲ್ಲವೆಂದು ಅನೇಕರಿಗೆ—ಸರ್ವಸಾಮಾನ್ಯವಾಗಿ ಎಲ್ಲರಿಗೂ—ತೋರುವುದು. ಇದೇ ದೊಡ್ಡದಾದ ಎರಡನೆಯ ಸಮಸ್ಯೆ. ಇನ್ನೂ ಅನೇಕ ಸಮಸ್ಯೆಗಳು ಈ ನಾಟಕದಲ್ಲಿ ಅಡಗಿವೆ. ವಾಚಕರಿಗೆ ನಾಟಕವನ್ನು ಓದುವಾಗ್ಗೆ ಇವು ಹೊಳೆಯುವುವು.

ಪಶ್ಚಿಮದೇಶಗಳಲ್ಲಿ ಸಾಮಾಜಿಕ ನಾಟಕಗಳನ್ನು ಬರೆಯುವವರಿಗೆ ಇಬ್ಸ್ನ್ ಮಹಾಕವಿಯು ಗುರುಸ್ಥಾನದಲ್ಲಿದ್ದಾನೆ. ಇವನ ನಾಟಕಗಳು ಯೂರೋಪ್ ಖಂಡದ ಎಲ್ಲಾ ಭಾಷೆಗಳಲ್ಲಿಯೂ ಅನುವಾದಿಸಲ್ಪಟ್ಟಿವೆ. ಸಾಮಾಜಿಕ ನಾಟಕರಚನೆಯಲ್ಲಿ "ಸೂತ್ರದ ಬೊಂಬೆ" (Doll's House) ಆದರ್ಶಪ್ರಾಯವಾಗಿ ಬಾಕಿಯವರೆಲ್ಲರಿಗೂ ಮೇಲು ಪಂಕ್ತಿಯನ್ನು ಹಾಕಿ ಕೊಟ್ಟಂತಿದೆ. ನಾಟಕ ಪ್ರಪಂಚದಲ್ಲಿ "ಸೂತ್ರದ ಬೊಂಬೆ"ಯು ಒಂದು ಕ್ರಾಂತಿಯನ್ನೇ ಉಂಟುಮಾಡಿತೆಂದು ಪಂಡಿತರು ತಿಳಿದಿರುತ್ತಾರೆ. ನಾಟಕಸಂವಿಧಾನ, ವಸ್ತುರಚನಾ ವಿನ್ಯಾಸ, ಸಮಯ ಸಂದರ್ಭಗಳ ಹೊಂದಾವಣೆ ಸ್ವಾಭಾವಿಕವಾದ ಭಾಷಣ, ಭಾಷಣಾನ್ವಯಚಾತುರ್ಯ, ಪಾತ್ರಗಳ "ಸ್ವಗತ" ಭಾಷಣಗಳ ಅಭಾವ, ಅನವಶ್ಯವಾದ ಮಂಗಳಾಚರಣೆಯಲ್ಲಿ ನಾಟಕವನ್ನು ಪರಿಸಮಾಪ್ತಿಮಾಡದಿರುವುದು (ಅಥವಾ ಶೋಕಪರ್ಯವಸಾಯಿಯಾಗಿ ಸಾಮಾಜಿಕ ನಾಟಕವನ್ನು ಬರೆಯಲು ಹಿಂದೆಗೆಯದಿರುವುದು)—ಇವುಗಳೆಲ್ಲವೂ ಸಾಮಾಜಿಕ ನಾಟಕಗಳ ಸರ್ವಸಮ್ಮತವಾದ ಲಕ್ಷಣಗಳೆನ್ನಿಸುವುದಕ್ಕೆ ಇಬ್ಸ್ನ್ ನಾಟಕಗಳೇ ಕಾರಣ. ಅವುಗಳಲ್ಲೂ "ಸೂತ್ರದ ಬೊಂಬೆ" ಅಗ್ರಸ್ಥಾನವನ್ನು ಸೇರಿರುವುದು. ಈಗಲೂ ಕೂಡ ಪ್ರಪಂಚದಲ್ಲಿ ಸುಪ್ರಸಿದ್ಧರಾದ ನಟಿಯರೆಲ್ಲರಿಗೂ ಒಂದು ಬಾರಿಯಾದರೂ "ನೋರಾ" ಪಾತ್ರವನ್ನು ವಹಿಸಿ ನಾಟಕ ಪ್ರೇಮಿಗಳಾದ ರಸಿಕರಾದ ಪಂಡಿತರ ಗಣನೆಗೆ ಬರಬೇಕೆಂದು ಆಸೆಯಿರುತ್ತೆಂದು ನಾಟಕ ಪ್ರಪಂಚದಲ್ಲಿ

ವಾಡಿಕೆಯಿದೆ. "ಸೂತ್ರದ ಬೊಂಬೆ" ಯನ್ನು ಪ್ರಪಂಚದಲ್ಲಿ ಎಲ್ಲಿಯಾದರೂ ಒಂದು ಕಡೆ ಆಡದಿರುವ ದಿನವೇ ಇಲ್ಲವೆಂದು ತಿಳಿದವರು ಹೇಳುತ್ತಾರೆ. ಎಷ್ಟರಮಟ್ಟಿನ ಲೋಕರಂಜನವಾದ ನಾಟಕವಿದು—"ಸೂತ್ರದ ಬೊಂಬೆ"--ಎಂಬುದು ಮೇಲೆ ಹೇಳಿದ ಅಂಶಗಳಿಂದ ಊಹಿಸಬಹುದು.

ನನ್ನ ಅನುವಾದವನ್ನು ಆಮೂಲಾಗ್ರವಾಗಿ ಶೋಧಿಸಿ ತಮ್ಮ ಆಶೀರ್ವಾದದೊಡನೆ ಪ್ರಕಟಿಸಲು ಪ್ರೋತ್ಸಾಹಕೊಟ್ಟ ಶ್ರೀಯುತ: ಬಿ. ಎಂ. ಶ್ರೀಕಂಠಯ್ಯನವರಿಗೆ ನಾನು ಚಿರಋಣಿಯಾಗಿದ್ದೇನೆ. ಹಿಂದೆ ನಾನು ಇಬ್ಸೆನ್ ಕವಿಯ ಮತ್ತೊಂದು ನಾಟಕವನ್ನು ಅನುವಾದನೆ ಮಾಡಿದಾಗ್ಗೆ ಶ್ರೀಯುತರು ಒಂದು ಮುನ್ನುಡಿಯನ್ನು ಬರೆದುಕೊಟ್ಟಿದ್ದರು. ಅದನ್ನು ಈ ನಾಟಕದೊಡನೆಯೂ ಸೇರಿಸಿದೆ. ಆ ಮುನ್ನುಡಿಯು ಇಬ್ಸೆನ್‌ಕವಿಯ ಎಲ್ಲಾ ನಾಟಕಗಳಿಗೂ ಅನ್ವಯಿಸತಕ್ಕುದಾಗಿದೆ. ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಮತ್ತು ಶ್ರೀ. ಸಿ. ಕೆ. ವೆಂಕಟರಾಮಯ್ಯ ಇವರಿಬ್ಬರೂ ಕನ್ನಡ ಪ್ರತಿಯನ್ನು ಓದಿ ಸಲಹೆಗಳನ್ನು ಕೊಟ್ಟು ಅನುವಾದವು ಸರ್ವಾದರಣೀಯವಾಗಿರುವುದೆಂದು ಬೆಂಬಲವನ್ನು ಕೊಟ್ಟರುವುದಕ್ಕಾಗಿ ಕೃತಜ್ಞನಾಗಿರುವೆನು. ನನ್ನ ನಾದಿನಿ ಚಿ|| ಸೌ|| ಮೀನಾಕ್ಷಮ್ಮನು ಶುದ್ಧಪ್ರತಿಯನ್ನು ಕನ್ನಡದಲ್ಲಿ ಬರೆದು ಮುದ್ರಣಕ್ಕೆ ಸಿದ್ಧಪಡಿಸಿಕೊಟ್ಟುದಕ್ಕಾಗಿ ಆಕೆಯ ಅನಂತ ಸೌಭಾಗ್ಯಕ್ಕೆ ನನ್ನ ಹರಕೆಗಳು.

ನಾನು ಹಿಂದೆ ಇಬ್ಸೆನ್ ಕವಿಯ Warriors of Helgeland orVikings ಎಂಬ ನಾಟಕವನ್ನು "ಆರ್ಯಕ" ಎಂಬ ಹೆಸರಿನಲ್ಲಿ ಅನುವಾದಿಸಿ ಪ್ರಕಟಿಸಿದಾಗ್ಗೆ—ಬೆಂಗಳೂರುನಗರದ ವಿಶ್ವಕರ್ಣಾಟಕ ಸಾಹಿತ್ಯಸಂಚಿಕೆಯಲ್ಲಿ ಪಂಡಿತರೊಬ್ಬರು ನಾಟಕದ ಮೂಲದಲ್ಲಿ ಇದ್ದ ಹೆಸರುಗಳನ್ನೇ ನಾನು ಉಪಯೋಗಿಸಿದ್ದರೆ ಚೆನ್ನಾಗಿತ್ತು ಎಂದು ಯುಕ್ತವಾದ ಕಾರಣಗಳಿಂದ ಸಾಧನೆಮಾಡಿದ್ದರು. ಮತ್ತೆ ಕೆಲವು ಸ್ನೇಹಿತರೂ ಕೂಡ ಹಾಗೆಯೇ ಅಭಿಪ್ರಾಯಪಟ್ಟಿದ್ದರಿಂದ ಈ ನಾಟಕದಲ್ಲಿ ಮೂಲದಲ್ಲಿರುವ ಪಾತ್ರಗಳ ಹೆಸರುಗಳನ್ನೇ ಇಟ್ಟುಕೊಂಡಿದೆ.

ಆರ್. ಫಾರ್ ಕುಹಾರ್ ಸರ್ ಷಾರ್ಪ್ (Mr. R. Farquharson Sharp) ಎಂಬುವರು ಇಂಗ್ಲೀಷಿನಲ್ಲಿ ಬರೆದಿರುವ ಗ್ರಂಥವನ್ನು ನನ್ನ ಅನುವಾದಕ್ಕೆ ಮೂಲಾಧಾರವನ್ನಾಗಿಟ್ಟುಕೊಂಡಿದೆ. ಕನ್ನಡಕ್ಕೆ ಪರಿವರ್ತಿಸಲು ಅನುಮತಿಯನ್ನಿತ್ತಿರುವ ಮೆಸರ್ಸ್ ಜೆ. ಎಂ. ಡೆಂಟ್ ಅಂಡ್ ಸನ್ (Messrs. J. M. Dent and Son) ಕಂಪೆನಿಯವರಿಗೆ ನಾನು ಕೃತಜ್ಞನಾಗಿದ್ದೇನೆ.

---

# ಮುನ್ನುಡಿ

"ಸ್ವತಂತ್ರ ಕಾವ್ಯವನ್ನು ಬರೆಯಬಲ್ಲ ಮಹನೀಯರು ಎಲ್ಲಿಯೋ ಕೆಲವರು ; ಮಿಕ್ಕವರಿಗೆ ಭಾಷಾಂತರವನ್ನುಮಾಡಿ ಉತ್ತಮ ಸಾಹಿತ್ಯವನ್ನು ತಮ್ಮ ದೇಶದಲ್ಲಿ ನಾಟಿಹಾಕುವುದಕ್ಕಿಂತ ಬೇರೆ ಘನವಾದ ಕಾರ್ಯ ಯಾವುದು?" ಎಂಬುದಾಗಿ ಕಾರ್ಲೈಲ್ ಒಂದು ಕಡೆ ಹೇಳಿರುತ್ತಾನೆ. ಕವಿತಿಲಕರ ಪುತ್ರರಾದ ಶ್ರೀಮಾನ್ ಎಸ್. ಜಿ. ಶಾಸ್ತ್ರಿಗಳು ಈ ತತ್ವವನ್ನು ಅನುಸರಿಸಿ ತಮ್ಮ ಮಿತ್ರರಿಂದ ಭಾಷಾಂತರಗಳನ್ನು ಮಾಡಿಸಿ, ತಾವೂ ಅದೇ ಕಾರ್ಯದಲ್ಲಿ ತೊಡಗಿ, "ಸಾಕ್ರಟೀಸನ ಮರಣ" ಎಂಬ ಗ್ರಂಥವನ್ನು ಪ್ಲೇಟೋವಿನ ಸಂವಾದಗಳನ್ನು ಆಧಾರವಾಗಿ ಉಳ್ಳ ಒಂದು ನಾಟಕವನ್ನು ಹಿಡಿದೂ, "ಆರ್ಯಕ" ಎಂಬ ಈ ಗ್ರಂಥವನ್ನು ಯೂರೋಪಿನ ಆಧುನಿಕ ನಾಟಕ ಸಾಹಿತ್ಯಕ್ಕೆ ಮೂಲಪುರುಷನೆಂದು ಹೇಳಬಹುದಾದ ಇಬ್ಸನ್ ಕವಿಯ "ಹೆಲ್ಗೆಲಂಡಿನ ವೀರರು" ಎಂಬ ನಾಟಕವನ್ನು ಹಿಡಿದೂ ಪ್ರವರ್ತಿಸಿರುತ್ತಾರೆ.

ಹೆನ್ರಿಕ್ ಇಬ್ಸನ್ (೧೮೨೮-೧೯೦೬) ಎಂಬಾತನು ನಾರ್ವೆದೇಶದ ಸುಪ್ರಸಿದ್ಧನಾದ ಕವಿ ಮತ್ತು ನಾಟಕಕಾರ. ಬಡತನದಲ್ಲಿ ಬೆಳೆದು, ವಿದ್ಯಾಭ್ಯಾಸಮಾಡಿ ತನ್ನ ಹತ್ತೊಂಬತ್ತನೆಯ ವರ್ಷದಲ್ಲಿ ಈತನು ಗ್ರಂಥರಚನೆಗೆ ಆರಂಭಿಸಿದನು. ಬಳಿಕ ಒಂದು ನಾಟಕ ಸಂಘಕ್ಕೆ ಸೇರಿ, ಅವರಿಗೆ ಆಡುವುದಕ್ಕೆ ನಾಟಕಗಳನ್ನು ಬರೆಯುತ್ತ, ೧೮೫೭ ರಲ್ಲಿ "ಹೆಲ್ಗೆಲಂಡಿನ ವೀರರು" ಎಂಬ ಐತಿಹಾಸಿಕ ನಾಟಕದಿಂದ ಮೊದಲು ಪ್ರಸಿದ್ಧಿಗೆ ಬಂದನು. ಈ ನಾಟಕದಲ್ಲಿ ತಮ್ಮ ಪೂರ್ವಿಕರ ಶ್ರೇಷ್ಠವಾದ ಇತಿಹಾಸಗಳ ಸಮುದ್ರಯಾನದ ಜೀವನ ಚಿತ್ರವನ್ನೂ, ಕ್ರೌರ್ಯ ಶೌರ್ಯಗಳನ್ನೂ, ಮಾನಾಭಿಮಾನಗಳನ್ನೂ ಪ್ರತಿಬಿಂಬಿಸಿರುತ್ತಾನೆ. ಇದರ ರಚನಾಕೌಶಲ್ಯವೂ, ಪಾತ್ರನಿರೂಪಣವೂ, ರಸೋದ್ವೇಗವೂ ಪ್ರಶಂಸಾರ್ಹವಾಗಿವೆ. ಇಬ್ಸನ್ ಕವಿಯ ಐತಿಹಾಸಿಕ, ರಂಜನ ಮತ್ತು ಕವನ ನಾಟಕಗಳಲ್ಲಿ ಇದರ ಜೊತೆಗೆ "ಬ್ರಾಂಡ್" (೧೮೬೭), "ಪಿಯರ್ ಗೈಂಟ್" (೧೮೬೯) "ಎಂಪರರ್ ಮತ್ತು ಗ್ಯಾಲಿಲಯನ್" (೧೮೭೩) ಎಂಬುವೂ

ಸೇರುತ್ತವೆ. ಇವುಗಳಲ್ಲೆಲ್ಲಾ ಪುರಾತನ ಚರಿತ್ರೆ, ವೀರಕಥೆ ಮನೋಹರವಾದ ಕವನ, ಯೋಗ್ಯವಾದ ಸನ್ನಿವೇಶ, ತೀಕ್ಷ್ಣವಾದ ಆನಂದ, ಶೋಕ, ಸಾಹಸಗಳ ಉಲ್ಲಾಸ, ಸ್ಥಿರಧೈರ್ಯಗಳುಳ್ಳ ಪ್ರಪಂಚ—ಇವು ಸುಂದರವಾದ ಛಂದಸ್ಸಿನಲ್ಲಿ ಪ್ರದರ್ಶಿತವಾಗಿವೆ.

ಈ ತರದ ರಂಜನ ನಾಟಕಗಳಿಗಿಂತಲೂ ಹೆಚ್ಚು ಪ್ರಾಶಸ್ತ್ಯವನ್ನು ಇಬ್ಸನ್ ಕವಿಗೆ ತಂದುವು ಅವನ ಸಾಮಾಜಿಕ ಗದ್ಯ ನಾಟಕಗಳು. ಇಬ್ಸನ್ನಿನ ಬಡತನದ ಮತ್ತು ನಿರಾದರಣೆಯ ಕಾಲದ ಮನಃಕ್ಲೇಶವೂ, ಸಮಾಜದಲ್ಲಿದ್ದ ಅನೇಕ ನ್ಯೂನತೆಗಳ ಮತ್ತು ಪ್ರಬಲ ದೋಷಗಳ ಪೂರ್ಣಾನುಭವವೂ, ಸಮಾಜಸಂಸ್ಕರಣಕ್ಕಾಗಿ ನಾಟಕದ ಮೂಲಕ ಜನಜೀವನವನ್ನು ಪ್ರತಿಬಿಂಬಿಸಬೇಕೆಂಬ ಕರ್ತವ್ಯಜ್ಞಾನವೂ ಈ ಸಾಮಾಜಿಕ ನಾಟಕಗಳ ಪ್ರೇರಕಗಳಾಗಿವೆ. ಇಂತಹ ನಾಟಕಗಳಲ್ಲಿ ಮುಖ್ಯವಾದುವು ಯಾವುವೆಂದರೆ—ಸಮಾಜ ಸ್ತಂಭಗಳು (Pillars of Society. 1877) ಬೊಂಬೆಯ ಮನೆ (A Doll's House, 1879) ಪ್ರೇತಗಳು (Ghosts, 1881) ಜನಗಳ ಶತ್ರು (An Enemy of the People, 1882) ರಾಜಶಿಲ್ಪಿ (The Master builder, 1892). ಈ ನಾಟಕಗಳಲ್ಲಿ ಸೌಂದರ್ಯಸಾಕ್ಷಾತ್ಕಾರದಿಂದ ಆನಂದವುಕ್ಕಿ ಹಾಡುವ ಕವಿಗೆ ಪ್ರತಿಯಾಗಿ, ಸಮಾಜವ್ಯಕ್ತಿಗಳ ದುಷ್ಟತನ ನೀಚತನಗಳಿಂದ ಹೃದಯದಲ್ಲಿ ಜುಗುಪ್ಸೆಯೂ ಆಗ್ರಹವೂ ಕನಲಿ, ಕೆಂಡವಾಗಿ, ಮರ್ಮೋದ್ಘಾಟನೆಯಿಂದ ಕೆಟ್ಟುದನ್ನು ನಿರ್ಮೂಲಮಾಡಿ, ಒಳ್ಳೆಯದನ್ನು ಜನಗಳ ಮನಸ್ಸಿನಲ್ಲಿ ಬಿತ್ತಬೇಕೆನ್ನುವ ಸಮಾಜಸುಧಾರಕನ ಉಗ್ರಮೂರ್ತಿ ಕಾಣಬರುತ್ತದೆ. ಛಂದಸ್ಸಿನ ಬದಲು ಗದ್ಯ; ರಸಾತ್ಮಕ ವಾಕ್ಯಕ್ಕೆ ಬಳಕೆಯ ಮಾತು; ಎದೆಯನ್ನುಬ್ಬಿಸುವ ವಿಶಾಲ ವಾತಾವರಣದ ಸ್ಥಾನದಲ್ಲಿ ಸಂಕುಚಿತ ಪ್ರದೇಶ, ಸಂಕಟದುಬ್ಬಸ; ಅದ್ವಿತೀಯ ವೀರ ಸುಂದರಮೂರ್ತಿಗಳಿದ್ದ ಕಡೆ ಸಾಧಾರಣ ಜನರ, ಕ್ಷುದ್ರಪುರುಷರ ವಿಷಾದಜನಕವಾದ ಛಾಯೆಗಳು—ಇವು ಇಬ್ಸನ್ನಿನ ಎರಡನೆಯ ತರದ ರಂಗಸ್ಥಳದಲ್ಲಿ ಬಂದು ಕುಣಿಯುತ್ತವೆ.

೧೯೨೮ರಲ್ಲಿ ಇಬ್ಸನ್ನಿನ ಎಪ್ಪತ್ತನೆಯ ಹುಟ್ಟಿದ ಹಬ್ಬದ ದಿವಸ ಆತನಿಗೆ ಪ್ರಪಂಚದ ಎಲ್ಲಾ ಭಾಗದ ಸಾಹಿತಿಗಳಿಂದಲೂ ಅಭಿನಂದನಗಳೂ, ಬಹುಮಾನಗಳೂ ಬಂದುಸುರಿದುವು ೧೮೯೯ರಲ್ಲಿ ನಾರ್ವೆ ರಾಜಧಾನಿ ಕ್ರಿಶ್ಚಿಯಾನಿಯದ ಜನಾಂಗದ ನಾಟಕ ಮಂದಿರದ (National Theatre) ಮುಂದೆ ಕಂಚಿನ ವಿಗ್ರಹವೊಂದು ಸ್ಥಾಪಿತವಾಯಿತು. ೧೯೦೬ರಲ್ಲಿ ಯೂರೋಪಿನ ನಾಟಕ ಪ್ರಪಂಚವನ್ನೇ ದುಃಖದಲ್ಲಿ ಮುಳುಗಿಸಿ ಇಬ್ಸನ್ನನು ದಿವಂಗತನಾದನು.

ಇಬ್ಸನ್ನಿನ ನಾಟಕಗಳನ್ನೂ ನಾಟಕ ಕವಿಗಳಲ್ಲಿ ಆತನ ಸ್ಥಾನವನ್ನೂ ಕುರಿತು ಇನ್ನೂ ಚರ್ಚೆಗಳು ನಡೆಯುತ್ತಲೇ ಇವೆ. ಕೆಲವರಿಗೆ ರಂಜನ ಕವನದಲ್ಲಿ, ಕೆಲವರಿಗೆ ರುದ್ರನಾಟಕದಲ್ಲಿ, ಕೆಲವರಿಗೆ ಪ್ರಹಸನದಲ್ಲಿ, ಕೆಲವರಿಗೆ ಸಾಮಾಜಿಕ ಚಿತ್ರದಲ್ಲಿ, ಕೆಲವರಿಗೆ ನೀತಿಧ್ಯೇಯಗಳಲ್ಲಿ, ಕೆಲವರಿಗೆ ಸಹಜಸೃಷ್ಟಿಯಲ್ಲಿ—ಹೀಗೆ ಒಬ್ಬೊಬ್ಬರಿಗೆ ಒಂದೊಂದು ಬಗೆ ಅಭಿರುಚಿ ಇರುತ್ತದೆ. ಅಹಂಕಾರ; ಬೂಟಾಟಿಕೆ; ಮುಚ್ಚಿಮಾಡಿದ ಪಾಪದ ಫಲ ಮಕ್ಕಳಲ್ಲಿ ಒಡೆದು ಮೂಡುವ ರೀತಿ, ಹೆಂಗಸರು ವ್ಯಕ್ತಿಸ್ವಾತಂತ್ರ್ಯವಿಲ್ಲದೆ ನಿರ್ಬಂಧ ಜೀವನದಲ್ಲಿ ಸಿಕ್ಕಿ ಬೊಂಬೆಗಳಾಗಿರುವುದರ ಪರಿಣಾಮ; ಧರ್ಮ ಮಾಡುವುದಕ್ಕೆ ಹೋದರೆ ಕರ್ಮ ಕಟ್ಟಿಕೊಳ್ಳುವುದು—ಜನಗಳ ಸ್ವಾರ್ಥಪರತೆಯಿಂದ; ಪೂರ್ವಕಾಲದ ಸಂಸ್ಕೃತಿಗೂ ಈ ಕಾಲದ ಸಂಸ್ಕೃತಿಗೂ ಉಂಟಾಗುವ ಸ್ಪರ್ಧೆ—ಇವೇ ಮುಂತಾದ ಭಾವ ಚಿತ್ರಗಳು ಇಬ್ಸನ್ನಿನ ನಾಟಕಗಳಲ್ಲಿ ತುಂಬಿವೆ. "ನಾನು ಬೋಧಕನಲ್ಲ; ಸಮಾಜದ ರೋಗಕ್ಕೆ ಚಿಕಿತ್ಸೆಯನ್ನು ಮಾಡಲಾರೆ, ಆದರೆ ಅವುಗಳನ್ನು ಪರಿಶೀಲಿಸಿ ರೋಗದ ಸ್ವಭಾವವಿಂತಹುದು ಎಂದು ಕಂಡುಹಿಡಿಯುವುದಕ್ಕೆ ಪ್ರಯತ್ನಪಟ್ಟಿದ್ದೇನೆ" ಎಂದು ಇಬ್ಸನ್ ಹೇಳಿದ್ದಾನೆ. ಕಥಾಸಂವಿಧಾನದಲ್ಲಿಯೂ, ಸ್ವಾಭಾವಿಕವಾದ ಸಾರವತ್ತಾದ ಸಂವಾದದಲ್ಲಿಯೂ, ವಿಮರ್ಶನ ಬುದ್ಧಿಯನ್ನು ಹುಟ್ಟಿಸುವುದರಲ್ಲಿಯೂ ಈತನ ನಾಟಕಗಳು ಶ್ಲಾಘ್ಯವಾಗಿವೆ ಎಂದು ಎಲ್ಲರೂ ಒಪ್ಪುತ್ತಾರೆ. ಗ್ರೀಕರು ಮೂವರು, ಷೇಕ್ಸ್ಪಿಯರ್, ಕಾಳಿದಾಸ—

ಇವರ ಮಟ್ಟಕ್ಕೆ ಇಬ್ಸನ್ ಏರಬಲ್ಲನೇ ಎಂಬುದು ಸಂಶಯ ವಿಷಯ. ಅದು ಹೇಗಾದರೂ ಇರಲಿ; ನಾಟಕ ಕಲೆ ಯೂರೋಪಿನಲ್ಲಿ ಕ್ಷೀಣ ದೆಶೆಗೆ ಬಂದಿದ್ದಾಗ ಅದನ್ನು ತಲೆಯೆತ್ತುವಂತೆ ಮಾಡಿ, ಈಗಿನ ನಾಟಕಕಾರರಿಗೆ ಮಾರ್ಗದರ್ಶಕನಾಗಿ, ಸಮಾಜ ಸುಧಾರಣೆಯ ಕಡೆಗೆ ಆಲೋಚನಾಪರರ ಬುದ್ಧಿಯನ್ನು ಸೆಳೆದ ಕೀರ್ತಿ ಇಬ್ಸನ್ನನಿಗೆ ಶಾಶ್ವತವಾಗಿ ಸಲ್ಲತಕ್ಕದು.

ಇಂತಹ ಉದ್ದಾಮ ಕವಿಯ ಪರಿಚಯವನ್ನು ಕನ್ನಡಿಗರಿಗೆ ಮಾಡಿಕೊಟ್ಟ ಶ್ರೀಮಾನ್ ಶಾಸ್ತ್ರಿಗಳಿಗೆ ನಾವೆಲ್ಲರೂ ಋಣಿಗಳು. ಇಬ್ಸನ್ ಕವಿಯ ಉತ್ತಮ ನಾಟಕಗಳೆಲ್ಲವನ್ನೂ ಇವರು ನಮಗೆ ಭಾಷಾಂತರಿಸಿಕೊಡಬೇಕೆಂದು ನಾವು ಅವರನ್ನು ಪ್ರಾರ್ಥಿಸುವುದಕ್ಕೆ ಅವರು ಈ ಒಳ್ಳೆಯ ಕೃತಿಯಿಂದ ನಮಗೆ ಧೈರ್ಯವನ್ನು ಕೊಟ್ಟಿದ್ದಾರೆ. ಅಲ್ಲೊಂದು ಗ್ರಂಥ, ಇಲ್ಲೊಂದು ಗ್ರಂಥವನ್ನು ಪರಿವರ್ತಿಸುವುದಕ್ಕಿಂತಲೂ, ಅಥವಾ ಒಂದೇ ಗ್ರಂಥಕ್ಕೆ ಅನೇಕರು ಕೈಹಾಕುವುದಕ್ಕಿಂತಲೂ, ನಮ್ಮ ಗ್ರಂಥಕಾರರು ಯಾವನಾದರೂ ಒಬ್ಬ ದೊಡ್ಡ ಕವಿಯನ್ನು ಆಯ್ದು, ಆತನ ಗ್ರಂಥಮಾಲೆಯಲ್ಲಿ ಪಾಂಡಿತ್ಯವನ್ನು ಸಂಪಾದಿಸಿ, ತಮ್ಮ ಜೀವಮಾನವನ್ನೇ ಆತನಿಗೆ ಧಾರೆಯೆರೆದು, ಆತನ ಗ್ರಂಥಗಳನ್ನೆಲ್ಲಾ ಕನ್ನಡಿಗರಿಗೆ ಅರ್ಪಿಸುತ್ತ ಬಂದರೆ ಎಷ್ಟೋ ಉಪಕಾರವಾದೀತು! ಜೊವೆಟ್ ಪ್ಲೇಟೋವಿಗೆ ಹೀಗೆ ತನ್ನ ಜೀವಮಾನವನ್ನು ಅರ್ಪಣಮಾಡಿದನು. ಕೀರ್ತಿಶೇಷರಾದ ವೆಂಕಟಾಚಾರ್ಯರು ಬಂಕಿಂ ಚಂದ್ರನಿಗೆ ಹೀಗೆ ತಮ್ಮ ಸರ್ವಶಕ್ತಿಯನ್ನೂ ವಿನಿಯೋಗಿಸಿದರು. ಭಾಷಾಂತರ ಕೀಳು ಕೆಲಸವಲ್ಲ; ಸುಲಭವಾದ ಕೆಲಸವೂ ಅಲ್ಲ; ನಿರರ್ಥಕವಾದ ಕೆಲಸವೂ ಅಲ್ಲ. ಒಟ್ಟಿನ ಮೇಲೆ ಕನ್ನಡಸಾಹಿತ್ಯವೆಲ್ಲಾ ಸಂಸ್ಕೃತ ಸಾಹಿತ್ಯದ ಭಾಷಾಂತರವಲ್ಲವೆ? ಆದುದುರಿಂದಲೇ ಭಾಷಾಂತರಕ್ಕೆ ತಮ್ಮ ಬಾಳನ್ನು ಮುಡಿಪುಕಟ್ಟಿದವರೂ ಕೃತಾರ್ಥರಾದ "ದಾಸರೇ" ಎಂದು ನಂಬಿ ಆರಂಭದಲ್ಲಿ ಹೇಳಿರುವ ವಾಕ್ಯವನ್ನು ಕಾರ್ಲೈಲ್ ನುಡಿದದ್ದು.

—ಬಿ. ಎಂ. ಶ್ರೀಕಂಠಯ್ಯ.

# ವಿವರಣೆ

" **ಸೂತ್ರದ ಗೊಂಬೆ** " ಯ ನಾಟಕದ ವ್ಯವಹಾರಗಳೆಲ್ಲವೂ ನಾರ್ವೆದೇಶದ ಒಂದು ಪಟ್ಟಣದಲ್ಲಿ ನಡೆಯುವುವು. ಚಳಿ ಪ್ರದೇಶಕ್ಕೆ ಸೇರಿದ ಭಾಗವಾದ್ದರಿಂದ ಆ ದೇಶದ ಜನರೆಲ್ಲರೂ ತುಪ್ಪಟದ ಬಟ್ಟೆಗಳನ್ನು ವಿಶೇಷವಾಗಿ ಉಪಯೋಗಿಸುತ್ತಾರೆ. ಚಳಿಗಾಲದಲ್ಲಿ ಮಂಜು ಸುರಿಯುವುದು ಸಾಮಾನ್ಯ. ಹೊರಗೆ ತಿರುಗಾಡಲು ಹೋದಾಗ್ಗ ಒಂದು ಬೆಚ್ಚಗಿರುವ ಮೇಲಂಗಿಯನ್ನೂ (over-coat) ಮತ್ತು ಅದರ ಜೊತೆಯಲ್ಲಿ ಕತ್ತಿನ ಸುತ್ತ ಒಂದು ಶಲ್ಯವನ್ನೂ (scarf) ಧರಿಸಿಕೊಳ್ಳುವ ಪದ್ಧತಿಯುಂಟು. ಮನೆಯೊಳಗೆ ಬಂದೊಡನೆ ಮೇಲಂಗಿಯನ್ನೂ ಮತ್ತು ಶಲ್ಯವನ್ನೂ ತೆಗೆದಿಡುವರು. ತಲೆಯಮೇಲೆ ಹಾಕಿಕೊಳ್ಳುವ ಟೋಪಿಯ (hat) ವಿಷಯದಲ್ಲೂ ಇದೇ ಪದ್ಧತಿಯುಂಟು. ಮನೆಯಲ್ಲಿ ವಾಸಮಾಡುವ ಚಿಕ್ಕಮನೆಗಳಲ್ಲೆಲ್ಲಾ ಶಾಖಕ್ಕೋಸ್ಕರವಾಗಿ ಬೆಂಕಿಯನ್ನಿಟ್ಟಿರುತ್ತಾರೆ. ನೆಲವನ್ನು ಬಿಟ್ಟು ಅರ್ಧ ಅಡಿ ಎತ್ತರದಲ್ಲಿ ಗೋಡೆಯಲ್ಲಿ ನೋಡುವುದಕ್ಕೆ ಅಂದವಾಗಿ ಕಾಣುವ ಒಲೆಗಳನ್ನು ಜೋಡಿಸಿ ಅದರಲ್ಲಿ ಕಲ್ಲಿದ್ದಲಿನ (coal) ಅಥವಾ ಸೌದೆಯ ಬೆಂಕಿಯನ್ನಿಟ್ಟಿರುತ್ತಾರೆ. ಮೇಜು, ಕುರ್ಚಿ, ಚಿತ್ರಪಠಗಳು (Tables, chairs, pictures and other furniture) ಮುಂತಾದ ಗೃಹೋಪಕರಣಗಳು ಗೃಹಸ್ಥನ ಸಾಮಾಜಿಕ ಗೌರವ ಮತ್ತು ಐಶ್ವರ್ಯ ಇವುಗಳಿಗನುಗುಣವಾಗಿರುತ್ತವೆ.

ನಾಟಕದ ಪಾತ್ರಗಳೆಲ್ಲವೂ ಕ್ರಿಸ್ತಮತಕ್ಕೆ ಸೇರಿದವುಗಳು. ಈ ಮತಕ್ಕೆ ಸೇರಿದವರ ಹೆಸರುಗಳಲ್ಲಿ ಎರಡುಭಾಗಗಳುಂಟು ಮೊದಲನೇ ಭಾಗಕ್ಕೆ ಕ್ರಿಶ್ಚಿಯನ್-ನೇಮ್ (Christian name) ಎಂತಲೂ ಎರಡನೇ ಭಾಗಕ್ಕೆ ಸರ್-ನೇಮ್ (Sur-name) ಅಥವಾ ಫ್ಯಾಮಿಲಿ-ನೇಮ್ (Family name) ಎಂತಲೂ ಹೆಸರು. ಒಂದು ಕ್ರಿಶ್ಚಿಯನ್-ನೇಮ್ ಮತ್ತು ಒಂದು ಸರ್-ನೇಮ್ ಪ್ರತಿ ಮನುಷ್ಯನ ಹೆಸರಿನಲ್ಲೂ ಇದ್ದೇ ಇರಬೇಕು. ಕೆಲವು ವೇಳೆ ಒಂದಕ್ಕಿಂತಲೂ

ಹೆಚ್ಚಾಗಿ ಕ್ರಿಶ್ಚಿಯನ್-ನೇಮ್ ಇರುವುದುಂಟು. ನಾಟಕದ ಪಾತ್ರಗಳಲ್ಲಿ ಮೊದಲನೆಯವನು ತೊರ್ವಾಲ್ಡ್-ಹೆಲ್ಮರ್. (Torvald-Helmer). "ತೊರ್ವಾಲ್ಡ್" ಎಂಬುವುದು ಕ್ರಿಶ್ಚಿಯನ್-ನೇಮ್. "ಹೆಲ್ಮರ್" ಎಂಬುದು ಸರ್-ನೇಮ್. ಅವನ ಹೆಂಡತಿಯ ಹೆಸರು ನೋರಾ ಹೆಲ್ಮರ್. ಇದರಲ್ಲಿ "ನೋರಾ" ಎಂಬುವುದು ಕ್ರಿಶ್ಚಿಯನ್ ನೇಮ್. ಮದುವೆಯಾದ ಒಡನೆ ಹೆಂಗಸರು ಗಂಡನ ಸರ್-ನೇಮನ್ನು ಉಪಯೋಗಿಸುತ್ತಾರೆ. ಮಿಸೆಸ್ ನೋರಾ ಹೆಲ್ಮರ್ (Mrs. Nora Helmer) ಅಂದರೆ ಹೆಲ್ಮರ್ ಎಂಬವನ ಹೆಂಡತಿಯೆಂದು ಅರ್ಥ. ಕ್ರಿಶ್ಚಿಯನ್-ನೇಮನ್ನು ಮಾತ್ರ ಯಾವಾಗಲೂ ಬದಲಾಯಿಸುವುದಿಲ್ಲ. ಒಬ್ಬರನ್ನೊಬ್ಬರು ಸಂಬೋಧಿಸುವಾಗ್ಯೆ ಒಂದು ಮರ್ಯಾದೆಯನ್ನು ಅನುಸರಿಸುತ್ತಾರೆ. ಸರ್ವೇಸಾಧಾರಣವಾಗಿ ಮಾತಾಡುವಾಗ್ಯೆ ಗಂಡಸರಿಗೆ "ಮಿಸ್ಟರ್" ಎಂಬುದಾಗಿಯೂ, ಮದುವೆಯಾದ ಹೆಂಗಸಿಗೆ "ಮಿಸೆಸ್" ಎಂಬ ಪ್ರತ್ಯಯಗಳನ್ನು ಹೆಸರಿನ ಮುಂಚೆ ಸೇರಿಸಿ ಹೇಳುತ್ತಾರೆ. ಉದಾಹರಣೆ:—ಮಿಸ್ಟರ್ ಮತ್ತು ಮಿಸೆಸ್ ಹೆಲ್ಮರ್ (Mr. and Mrs. Helmer). ಕೇವಲ ಹತ್ತಿರ ಸಂಬಂಧವಿರುವವರು ಒಬ್ಬರನ್ನೊಬ್ಬರು ಸಂಬೋಧಿಸುವಾಗ್ಯೆ ಕ್ರಿಶ್ಚಿಯನ್ ನೇಮನ್ನು ಉಪಯೋಗಿಸುತ್ತಾರೆ. ಅತ್ಯಂತ ಸಲಿಗೆಯಲ್ಲಿರುವ ಸ್ನೇಹಿತರೂ ಕೂಡ ಕ್ರಿಶ್ಚಿಯನ್ ಹೆಸರುಗಳನ್ನು ಉಪಯೋಗಿಸುತ್ತಾರೆ. ನಾಟಕದಲ್ಲಿ ಗಂಡನು ಹೆಂಡತಿಯನ್ನು "ನೋರಾ" ಎಂಬುದಾಗಿಯೂ, ಹೆಂಡತಿಯು ಗಂಡನನ್ನು "ತೊರ್ವಾಲ್ಡ್" ಎಂಬುದಾಗಿಯೂ ಸಂಬೋಧಿಸುತ್ತಾರೆ. ನೋರಾ ತನ್ನ ಸ್ನೇಹಿತಳನ್ನು "ಕ್ರಿಸ್ಟೀನ್" ಎಂದು ಕೂಗುತ್ತಾಳೆ.

ಕ್ರೈಸ್ತಮತಾವಲಂಬಿಗಳಿಗೆ ಕ್ರಿಸ್ತನ ಜನ್ಮದಿನ ಒಂದು ದೊಡ್ಡ ಹಬ್ಬ. ಈ ಹಬ್ಬಕ್ಕೆ "ಕ್ರಿಸ್‌ಮಸ್" ಎನ್ನುತ್ತಾರೆ (christmas) ಆ ದಿವಸ ಎಲ್ಲರೂ ಚರ್ಚಿಗೆ ಹೋಗಿ ದೇವತಾ ಪ್ರಾರ್ಥನೆಮಾಡಿ ಮನೆಯಲ್ಲಿ ಹಬ್ಬದಡಿಗೆ ಊಟಮಾಡಿ ಆಟಪಾಟಗಳಲ್ಲಿ ಸಂತೋಷವಾಗಿ ಕಾಲವನ್ನು ಕಳೆಯುತ್ತಾರೆ. ಮಕ್ಕಳಿರುವ ಮನೆಯಲ್ಲಿ ರಾತ್ರಿಯಲ್ಲಿ

ಮಕ್ಕಳಿಗೋಸ್ಕರ ಒಂದು ಗಿಡವನ್ನು ತಂದು ಅದನ್ನು ಶೃಂಗರಿಸಿ ಅದರ ಕೊಂಬೆಗಳಿಗೆ ದೀಪಗಳನ್ನೂ ಮತ್ತು ಮಕ್ಕಳಿಗೋಸ್ಕರ ತಂದಿರುವ ಆಟದ ಸಾಮಾನುಗಳನ್ನೂ ಕಟ್ಟಿರುತ್ತಾರೆ. ಹುಡುಗರೊಡನೆ ದೊಡ್ಡವರೂ ಆಟವಾಡುತ್ತಾರೆ. ಕೊನೆಗೆ ಆಟದ ಸಾಮಾನುಗಳನ್ನೆಲ್ಲಾ ಮಕ್ಕಳಿಗೆ ಹಂಚುತ್ತಾರೆ. ಹಾಗೆ ಶೃಂಗರಿಸಿರುವ ಗಿಡಕ್ಕೆ "ಕ್ರಿಸ್‌ಮಸ್ ಟ್ರಿ" (Christmas tree) ಎಂದು ಹೆಸರು. ಆ ಹಬ್ಬದ ದಿನ ಜನಗಳು ಒಬ್ಬರಿಗೊಬ್ಬರು ಉಡುಗೊರೆ ಅಥವಾ ಇತರ ಬಹುಮಾನಗಳನ್ನು (Christmas presents) ಕೊಡುವ ವಾಡಿಕೆಯುಂಟು. ನಾಟಕಾರಂಭದಲ್ಲಿ ಈ ಸಂಪ್ರದಾಯಗಳ ಮಾತು ಬರುವುದು.

ಪಶ್ಚಿಮ ದೇಶಗಳಲ್ಲಿ ನೃತ್ಯವು (Dancing) ಸರ್ವೇಸಾಧಾರಣವಾಗಿರುವುದು. ನೃತ್ಯವು ಯಾವಾಗಲೂ ಸಂಗೀತದೊಡನೆ ತಾಳಕ್ಕೆ ಅನುಗುಣವಾಗಿ ಗತಿಗಳನ್ನು ಸೇರಿಸಿಕೊಂಡು ಅಂದಚೆಂದಗಳಿಂದಲೂ ಹಾವಭಾವ ವಿಲಾಸಗಳಿಂದಲೂ ಕೂಡಿ ರಸಾತ್ಮಕವಾಗಿರುವುದು. ಗಂಡಸರು ಮತ್ತು ಹೆಂಗಸರು ನೃತ್ಯದಲ್ಲಿ ಒಟ್ಟಿಗೆ ಭಾಗಿಗಳಾಗುವರು. ರಂಗಸ್ಥಳದಲ್ಲಿ ಹೆಂಗಸು ಮತ್ತು ಗಂಡಸು ಒಂಟಿಯಾಗಿ ನಾಟ್ಯವನ್ನು ಪ್ರದರ್ಶಿಸುವುದೂ ಉಂಟು. ಕೆಲವು ವೇಳೆ ಅನ್ಯಪಾತ್ರಗಳ ವೇಷಗಳನ್ನು ಧರಿಸಿ ನೃತ್ಯವಾಡುವುದುಂಟು. ಅಂಥಾವುಗಳನ್ನು "ಫ್ಯಾನ್ಸಿ ಡ್ರೆಸ್ ಬಾಲ್" (Fancy Dress Ball) ಎಂದು ಕರೆಯುತ್ತಾರೆ. ನಾಟಕದಲ್ಲಿ ನೋರಾ ಹೆಲ್ಮರ್ (ಕಥಾನಾಯಿಕೆ) ಅಂಥಾ ನೃತ್ಯವೊಂದರಲ್ಲಿ ಭಾಗವಹಿಸುತ್ತಾಳೆ. ಆಕೆಯು ಧರಿಸುವ ವೇಷದ ಬಟ್ಟೆಬರೆಗಳ ವಿಷಯವು ನಾಟಕದಲ್ಲಿ ಪ್ರಸ್ತಾಪಿಸಲ್ಪಡುವುದು.

---

## DRAMATIS PERSONAE
## ಈ ನಾಟಕದಲ್ಲಿರುವ ಪಾತ್ರಗಳು

---

1. Torvald Helmer
—ತೋರ್ವಾಲ್ಡ್ ಹೆಲ್ಮರ್ ಒಬ್ಬ ಗೃಹಸ್ಥ

2. Nora, (his wife)
—ನೋರಾ (ಅವನ ಹೆಂಡತಿ)

3. Doctor Rank
—ಡಾಕ್ಟರ್ ರ್‍ಯಾಂಕ್

4. Mrs. Linde
—ಮಿಸೆಸ್ ಲಿಂಡ್

5. Nils Krogstad
—ನಿಲ್ಸ್ ಕ್ರಾಗ್‌ಸ್ಟಾಡ್

6. Helmer's three young children
—ಹೆಲ್ಮರನ ಮೂರು ಚಿಕ್ಕಮಕ್ಕಳು

7. Anne, their nurse
—ಆನ್—ಅವರನ್ನು ನೋಡಿಕೊಳ್ಳುವ ದಾದಿ

8. A house-maid
—ಒಬ್ಬಳು ಸೇವಕಿ

9. A Porter
—ಒಬ್ಬ ಸೇವಕ

(The action takes place in Helmer's house)
(ಘಟನೆಗಳು ನಡೆಯುವುದು ಹೆಲ್ಮರನ ಮನೆಯಲ್ಲಿ)

# " ಸೂತ್ರದ ಬೊಂಬೆ"

—o—

## ಮೊದಲನೇ ಅಂಕ

### ದೃಶ್ಯ ೧

(ಸ್ಥಾನ: ಅಂದವಾಗಿಯೂ, ಅಚ್ಚುಕಟ್ಟಾಗಿಯೂ ಅಲಂಕೃತವಾಗಿರುವ ಒಂದು ಕೊಠಡಿ. ಬೆಲೆಯಲ್ಲಿ ಅತಿಯಾಗಿಲ್ಲದಿದ್ದರೂ ಸೊಗಸು ಸೂಸುತ್ತಿರುವ ಕುರ್ಚಿಗಳು, ಮುಂತಾದುವುಗಳಿರುವುವು. ಹಿಂಭಾಗದಲ್ಲಿ ಮನೆಯೊಳಗಿನ ಹಜಾರಕ್ಕೆ ಪ್ರವೇಶಿಸಬಹುದಾದ ಬಾಗಿಲು ಬಲಪಾರ್ಶ್ವದಲ್ಲಿ ಕಾಣಿಸುತ್ತಿರುವುದು. ಎಡಪಾರ್ಶ್ವದಲ್ಲಿ ಕಾಣುವ ಬಾಗಿಲು ಹೆಲ್ಮರನ ವ್ಯಾಸಂಗ ಮುಂತಾದ ಕೆಲಸಗಳನ್ನು ನಡೆಯಿಸುವ ಕೊಠಡಿಯದು. ಇವೆರಡರ ನಡುವೆ—ರಂಗಸ್ಥಳದ ಹಿಂಭಾಗದಲ್ಲಿ— ಒಂದು "ಪಿಯಾನೋ" ಇದೆ. ಎಡಗಡೆಯ ಗೋಡೆಯ ಮಧ್ಯದಲ್ಲೊಂದು ಬಾಗಿಲೂ, ಅದರಿಂದಾಚೆಗೊಂದು ಕಿಟಕಿಯೂ ಇವೆ. ಕಿಟಕಿಯ ಹತ್ತಿರ ಒಂದು ದುಂಡುಮೇಜು, ಕುರ್ಚಿಗಳು, ಒಂದು ಚಿಕ್ಕ ಸೋಫಾ ಇವುಗಳಿರುವುವು. ಬಲಗಡೆಯ ಗೋಡೆಯ ಆಚೆ ಭಾಗದಲ್ಲಿ ಮತ್ತೊಂದು ಬಾಗಿಲು. ಅದೇಕಡೆ ರಂಗಸ್ಥಳದ ನೆಲದ ಸಾಲು ದೀಪಗಳಿಗೆ ಸಮೀಪವಾಗಿ ಲೋಹದ ದೊಡ್ಡ ಅಗ್ಗಿಷ್ಟಿಕೆಯಂತಿರುವ ಮಾದರಿಯ ಒಲೆ; ಎರಡು ಒರಗು ಕುರ್ಚಿಗಳು ಮತ್ತು ಒಂದು ತೂಗು ಕುರ್ಚಿ; ಬಾಗಿಲಿಗೂ, ಆ ಒಲೆಗೂ ಮಧ್ಯದಲ್ಲೊಂದು ಚಿಕ್ಕ ಮೇಜು. ಗೋಡೆಗಳಮೇಲೆ ಕೆತ್ತನೆಯಾಗಿರುವ ಚಿತ್ರಕೆಲಸಗಳು. ಪಿಂಗಾಣಿ ಸಾಮಾನು ಮುಂತಾದ ಸಣ್ಣಪುಟ್ಟ ವಸ್ತುಗಳಿರುವ ಒಂದು ಚಿಕ್ಕ ಬೀರು; ಅಂದವಾಗಿ ಕಟ್ಟುಹಾಕಿರುವ ಪುಸ್ತಕಗಳಿರುವ ಸೊಗಸಾದ ಒಂದು ಮಹಿಹಿಡಿಕೆ. ನೆಲಕ್ಕೆಲ್ಲ ಜಮಖಾನ ಹಾಸಿದೆ. ಒಲೆಯಲ್ಲಿ ಬೆಂಕಿ ಉರಿಯುತ್ತಿರುವುದು. ಚಳಿಗಾಲ. ಹಜಾರದಲ್ಲಿ ಘಂಟೆಯ ಧ್ವನಿಯಾಗುವುದು. ಬಳಿಕ ಶೀಘ್ರದಲ್ಲಿಯೇ ಬಾಗಿಲು ತೆರೆದ ಶಬ್ದ. ಬಾಗಿಲನ್ನು ತೆರೆದುಕೊಂಡು

ನೋರಾ ಪ್ರವೇಶಿಸುವಳು. ಅವಳು ಕಿರುದನಿಯಲ್ಲೊಂದು ಹಾಡನ್ನು ಹೇಳಿಕೊಳ್ಳುತ್ತ ಉತ್ಸಾಹ ಪರವಶಳಾಗಿ ಪ್ರವೇಶಿಸುವಳು. ಅವಳ ಉಡುಪನ್ನು ನೋಡಿದರೆ ಸಂಚಾರಾರ್ಥವಾಗಿ ಮನೆಯಿಂದ ಹೊರಗೆಹೋಗಿ ಬಂದವಳಂತೆ ತೋರುವುದು. ಅವಳು ಹಲಕೆಲವು ಕಟ್ಟುಗಳನ್ನೂ ಸಣ್ಣ ಪುಟ್ಟ ಗಂಟುಗಳನ್ನೂ ತಂದಿರುವಳು. ಅವುಗಳನ್ನು ಅವಳು ಬಲಗಡೆಯಲ್ಲಿರುವ ಮೇಜಿನ ಮೇಲಿಡುವಳು. ನೋರಾ ಬಂದಮೇಲೆ ಹೊರಬಾಗಿಲನ್ನು ತೆರೆದಿಟ್ಟೇ ಬಂದಿರುವಳು. "ಕ್ರಿಸ್‌ಮಸ್" ಗಿಡವನ್ನೂ ಮತ್ತು ಒಂದು ದೊಡ್ಡ ಬುಟ್ಟಿಯನ್ನೂ ತಂದಿರುವ ಸೇವಕನು ಬಂದು ನಿಂತುದು ಬಾಗಿಲಿನಿಂದಾಚೆ ಕಾಣಿಸುವುದು. ಸೇವಕಿಯು ಬಾಗಿಲನ್ನು ದೊಡ್ಡದಾಗಿ ತೆರೆದು ಅವನಿಂದ ಅವುಗಳನ್ನು ತೆಗೆದುಕೊಳ್ಳುವಳು.)

ನೋರಾ:—ಜೋಪಾನವಾಗಿ ಕ್ರಿಸ್‌ಮಸ್ ಗಿಡವನ್ನು ಬಚ್ಚಿಡು, ಹೆಲೆ‌ನ್! ಮಕ್ಕಳ ಕಣ್ಣಿಗೆ ಬಿದ್ದೀತು, ಜೋಕೆ, ಸಾಯಂಕಾಲ ಅದನ್ನು ಸಿಂಗರಿಸುವ ತನಕ. (ಗಿಡವನ್ನು ತಂದ ಆಳಿನ ಕಡೆಗೆ ತಿರುಗಿ) ಎಷ್ಟು ಕೊಡಬೇಕು ?

ಆಳು:—ಆರು ಪೆನ್ಸ್.

ನೋರಾ:—ಇಗೋ ಒಂದು ಷಿಲ್ಲಿಂಗ್, ಚಿಲ್ಲರೆ ಬೇಡ ನೀನೇ ಇಟ್ಟುಕೋ. (ಆಳು ಸಂತೋಷಪಟ್ಟುಕೊಂಡು ನೋರಾವನ್ನು ವಂದಿಸಿ ಬಾಗಿಲು ಮುಚ್ಚಿಕೊಂಡು ಹೊರಗೆ ಹೋಗುವನು. ತನ್ನ ಟೋಪಿಯನ್ನೂ, ಅಂಗಿಯನ್ನೂ ಬಿಚ್ಚುತ್ತಾ ನೋರಾ ನಗುವಳು. ಜೋಬಿನಿಂದ ಮಿಠಾಯಿಯ ಪೊಟ್ಟಣವೊಂದನ್ನು ತೆಗೆದು ಎರಡು ಮಿಠಾಯಿನ ಚೂರುಗಳನ್ನು ತಿನ್ನುವಳು. ಅನಂತರ ಮೆಲ್ಲಗೆ ಗಂಡನ ಚಿಕ್ಕಮನೆಯ ಬಾಗಿಲ ಹತ್ತಿರ ಹೋಗಿ ಕಿವಿಗೊಟ್ಟು ಕೇಳುವಳು) ಸರಿ. ಮನೆಯಲ್ಲೇ ಇದ್ದಾನೆ. (ಹಾಡನ್ನು ಗುಂಯಿಗುಟ್ಟುತ್ತಾ ಬಲಗಡೆ ಇರುವ ಮೇಜಿನ ಹತ್ತಿರಕ್ಕೆ ಹೋಗುವಳು )

ಹೆಲ್ಮರ್:—(ತನ್ನ ಕಿರುಮನೆಯೊಳಗಿಂದಲೇ ಕೂಗುತ್ತಾ) ಯಾರದು ? ನನ್ನ ಪುಟ್ಟುಹಕ್ಕಿಯೇ ಹಾಡುತ್ತಿರುವುದು ?

ನೋರಾ:—(ಪೊಟ್ಟಣಗಳನ್ನು ಬಿಚ್ಚುತ್ತಾ) ಹುಂ! ನಾನೆ!

ಹೆಲ್ಮರ್:—ನನ್ನ ಪುಟ್ಟ ಅಳಿಲಿನ ಕುಂಚವೋ ಅಲ್ಲಿ ಒಡಾಡುವುದು?

ನೋರಾ:—ಹುಂ!

ಹೆಲ್ಮರ್:—ನನ್ನ ಅಳಿಲು ಯಾವಾಗ ಬಂತು ಮನೆಗೆ?

ನೋರಾ:—ಇದೇ ತಾನೆ. (ಮಿಠಾಯಿಯ ಪೊಟ್ಟಣವನ್ನು ಜೋಬಿನಲ್ಲಿಟ್ಟು ಬಾಯಿ ಒರಸಿಕೊಂಡು) ಇಲ್ಲಿ ಬಾ ಇಲ್ಲಿ, ತೊರ್ವಾಲ್ಡ್! ನಾನೇನು ಕೊಂಡುಕೊಂಡು ಬಂದಿದೇನೆ ನೋಡು ಬಾ.

ಹೆಲ್ಮರ್:—ನನ್ನನ್ನು ತೊಂದರೆಪಡಿಸಬೇಡ. (ಸ್ವಲ್ಪ ಹೊತ್ತಾದ ಮೇಲೆ ಚಿಕ್ಕಮನೆಯ ಬಾಗಿಲನ್ನು ತೆಗೆದು ಕೈಯಲ್ಲಿ ಲೇಖಣಿಯನ್ನು ಹಿಡಿದುಕೊಂಡು ಇಣಿಕಿ ನೋಡುವನು.) ಕೊಂಡು ಕೊಂಡು ಬಂದೆ ಅಂದೆಯಾ? ಇಷ್ಟನ್ನೂ? ಅಯ್ಯೋ, ನನ್ನ ಮುದ್ದು ದುಂದುಗಾತಿ! ದುಡ್ಡು ದಂಡ ಮಾಡುವುದು ಇನ್ನೂ ಬಿಟ್ಟಿಲ್ಲವೆ?

ನೋರಾ:—ಏಕೆ ಬಿಡಬೇಕು, ತೊರ್ವಾಲ್ಡ್, ಈ ವರ್ಷ ಕೈ ಧಾರಾಳ ಮಾಡಲು ನಮಗೆ ಸ್ವಲ್ಪ ಅನುಕೂಲವಾಗಿರುವಾಗ? ಹಬ್ಬ ಹಬ್ಬದಲ್ಲೂ ಇದುವರೆಗೂ ಕೈಹಿಡದದ್ದೇ ಸಾಕಾಗಿದೆ.

ಹೆಲ್ಮರ್:—ಹಾಗೆ ಅಂತ ಹುಚ್ಚಾಬಟ್ಟೆ ಹಣ ತೀನುತೇರು ಮಾಡುವುದಕ್ಕಾಗುತ್ತದೆಯೆ?

ನೋರಾ:—ಸ್ವಲ್ಪ, ತೊರ್ವಾಲ್ಡ್, ಒಂದಿಷ್ಟು, ಒಂದು ರವೆಯಷ್ಟು ಯಥೇಷ್ಟವಾಗಿ ಖರ್ಚುಮಾಡಬಹುದಲ್ಲವೆ? ಒಂದು ಪುಟ್ಟ ಸಾಸುವೆ ಕಾಳಿನಷ್ಟು? ನಿನಗೆ ದೊಡ್ಡ ಸಂಬಳವಾಗಿ ಕೈತುಂಬ ಹಣವನ್ನು ಸಂಪಾದಿಸುವುದಿಲ್ಲವೆ?

ಹೆಲ್ಮರ್:—ಸರಿಯೆ! ಹೊಸ ವರ್ಷದಿಂದ! ಆಮೇಲೂ ಸಂಬಳ ಕೈಗೆ ಬರುವುದಕ್ಕೆ ಮೂರು ತಿಂಗಳಾಗಬೇಕು.

ನೋರಾ:—ಪಿಷ್! ಅದುವರೆಗೆ ಸಾಲ ತಂದರಾಯಿತು.

ಹೆಲ್ಮರ್:—ನೋರಾ! (ಅವಳ ಕೈಯನ್ನು ಹಿಡಿದುಕೊಂಡು ಪ್ರೀತಿಯಿಂದ ಕಿವಿಯನ್ನು ಮೆತ್ತಗೆ ಹಿಂಡಿ) ಇನ್ನೂ ಬಿಟ್ಟಿಲ್ಲ, ನಿನ್ನ ಹುಡುಗಾಟದ ಬುದ್ಧಿ? ಈ ಹೊತ್ತು ನಾನು ಐವತ್ತು ಪೌಂಡು ಸಾಲತಂದೆ ಅನ್ನು, ಕ್ರಿಸ್‌ಮಸ್ ವಾರದಲ್ಲಿ ನೀನು ಖರ್ಚು ಮಾಡಿಬಿಟ್ಟೆ ಅನ್ನು, ಆಮೇಲೆ ವರ್ಷಾದಿಯ ಹಬ್ಬದದಿನ ನನ್ನ ತಲೆಮೇಲೆ ಒಂದು ಕಲ್ಲುಬಿದ್ದು, ನಾನು ಸತ್ತರೆ—?

ನೋರಾ:—(ತನ್ನ ಕೈಗಳಿಂದ ಅವನ ಬಾಯನ್ನು ಮುಚ್ಚಿ) ಛೀ, ಛೀ, ಹೀಗೆಲ್ಲಾ ಕೆಟ್ಟಕೆಟ್ಟದು ಆಡಬಾರದು!

ಹೆಲ್ಮರ್:—ಇರಲಿ, ಒಂದುವೇಳೆ ನಾನು ಹೇಳಿದ ಹಾಗೆಯೇ ಆಯಿತು,—ಆಗ?

ನೋರಾ:—ಹಾಗಾದರೆ ಕೊಡೋದೋ ಬಿಡೋದೋ ಆ ಪಾಡು ನನಗೇಕೆ?

ಹೆಲ್ಮರ್:—ಸಾಲ ಕೊಟ್ಟವರ ಗತಿ?

ನೋರಾ:—ಅವರ ಗತಿಗಿತಿ ಯಾರಿಗೆ ಬೇಕು? ಅವರು ಯಾರೋ ನಾನು ಯಾಕೆ ವಿಚಾರಿಸಿಕೊಂಡು ಹೋಗಲಿ?

ಹೆಲ್ಮರ್:—ಇದಕ್ಕೇ ಹೆಂಗಸರು ಅನ್ನುವುದು! ನೋರಾ! ಹುಡುಗಾಟ ಹಾಗಿರಲಿ. ನನ್ನ ಮನಸ್ಸು ನಿನಗೆ ಗೊತ್ತೇ ಇದೆ. ಸಾಲವೂ ಬೇಡ ಸೋಲವೂ ಬೇಡ. ಸಾಲದಿಂದ ನಡೆಯುವ ಸಂಸಾರದಲ್ಲಿ ಚೆನ್ನೂ ಇಲ್ಲ-ಸುಖವೂ ಇಲ್ಲ. ಸ್ವಾತಂತ್ರ್ಯ ಮೊದಲೇ ಇಲ್ಲ. ಇದುವರೆಗೆ ಕಷ್ಟಪಟ್ಟು ನಾವಿಬ್ಬರೂ ಸಾಲವಿಲ್ಲದೆ ತಳ್ಳಿಕೊಂಡು ಬಂದಿದ್ದೇವೆ. ಇನ್ನೂ ಸ್ವಲ್ಪಕಾಲ ದುಡ್ಡು ಕೂಡುವ ತನಕ ಮನಸ್ಸು ಬಿಗಿ ಹಿಡಿದಿರೋಣ.

ನೋರಾ:—(ಒಲೆಯ ಕಡೆಗೆ ಹೋಗುತ್ತಾ) ನಿನ್ನ ಇಷ್ಟ, ತೊರ್ವಾಲ್ಡ್.

ಹೆಲ್ಮರ್:—(ಅವಳ ಹಿಂದೆಯೇ ಹೋಗುತ್ತಾ) ಬಾ! ಬಾ!! ನನ್ನ ಪುಟ್ಟ ಹಕ್ಕಿ ಹೀಗೆ ರೆಕ್ಕೆ ಜೋಲ ಬಿಡಬಾರದು! ಇದೇನಿದು? ನನ್ನ ಪುಟ್ಟ ಅಳಲಿಗೆ ಕೋಪಬಂತೆ? (ಹಣದ ಚೀಲವನ್ನು ಜೇಬಿನಿಂದ ತೆಗೆದು) ನೋರಾ-ಇಲ್ಲೇನಿದೆ ನೋಡು!

ನೋರಾ:—(ಸರಕ್ಕನೆ ಹಿಂತಿರುಗಿ ನೋಡಿ) ಹಣ!

ಹೆಲ್ಮರ್:—ತಗೋ! ಕ್ರಿಸ್ಮಸ್ ಹಬ್ಬದ ಹೆಚ್ಚುಗಟ್ಟೆಳಿಗೆ ತುಂಬಾ ಹಣ ಬೇಕಾಗುತ್ತೆಂದು ನನಗೆ ಗೊತ್ತಿಲ್ಲವೆ?

ನೋರಾ:—(ಹಣವನ್ನು ಎಣಿಸುತ್ತಾ) ಹತ್ತು-ಇಪ್ಪತ್ತು-ಮೂವತ್ತು-ನಲವತ್ತು, ನೀನು ಒಳ್ಳೆಯವನು ತೊರ್ವಾಲ್ಡ್, ತುಂಬಾ ಒಳ್ಳೆಯವನು; ಬಹಳ ದಿನಗಳು ನನಗೆ ಇನ್ನು ಏನೂ ಯೋಚನೆಯಿಲ್ಲ.

ಹೆಲ್ಮರ್:—ಇರಕೂಡದು.

ನೋರಾ:—ಆಗಲಿ, ಆಗಲಿ, ನೋಡಿಕೊಳ್ಳುತ್ತೇನೆ. ಈಗ ಇಲ್ಲಿ ಬಾ. ನಾನು ಕೊಂಡಿರುವುದನ್ನೆಲ್ಲಾ ನೋಡು. ಅಗ್ಗವಾದ ಬೆಲೆ! ಐವಾರನಿಗೆ ಹೊಸ ಅಂಗಿಷರಾಯಿ, ಕತ್ತಿ; ಬಾಬ್‌ಗೆ ಒಂದು ಕುದುರೆ ತುತ್ತೂರಿ; ಎಮ್ಮೀಗೆ ಒಂದು ಬೊಂಬೆ ಮತ್ತು ಬೊಂಬೆಯನ್ನು ಮಲಗಿಸುವುದಕ್ಕೆ ತೊಟ್ಟಿಲು. ಬೊಂಬೆ ಅಷ್ಟು ಚೆಲುವಾಗಿಲ್ಲ, ಹೇಗಿದ್ದರೂ ಒಂದೆರಡು ದಿನಗಳಲ್ಲಿ ಅದನ್ನು ಚೂರುಚೂರು ಮಾಡಿಬಿಡುತ್ತಾಳೆ. ಮನೆಯ ಕೆಲಸದವರಿಗೆ ಬಟ್ಟೆ ಥಾನುಗಳು, ಕೈವಸ್ತ್ರಗಳು; ದಾದಿ ಆನಿಗೆ ಮಾತ್ರ ಏನಾದರೂ ಭಾರಿಯಾದ್ದನ್ನು ಕೊಡಬೇಕು.

ಹೆಲ್ಮರ್:—ಈ ಗಂಟನಲ್ಲಿ ಏನಿದೆ?

ನೋರಾ:—(ಕೂಗಿಕೊಂಡು) ಬೇಡ, ಬೇಡ, ಸಂಜೆಯವರೆಗೂ ನೀನು ಅದನ್ನು ನೋಡಕೂಡದು.

ಹೆಲ್ಮರ್:—ಆಯಿತು. ನಿನಗೇನು ಬೇಕು ಹೇಳು ನನ್ನ ಪುಟ್ಟು ದುಂದುಗಾತಿ?

ನೋರಾ:—ನನಗೆ? ಖಂಡಿತವಾಗಿಯೂ ನನಗೇನೂ ಬೇಡ.

ಹೆಲ್ಮರ್:—ಹಾಗುಂಟೆ? ನಮ್ಮ ಶಕ್ತಿಗೆ ಮೀರದ್ದೇನಾದರೂ ನಿನಗಿಚ್ಛೆಯಾದದ್ದು ಹೇಳು.

ನೋರಾ:—ಏನು ಹೇಳಲಿ ? ತೊರ್ವಾಲ್ಡ್, ನನಗೇನೂ ತೋಚುವುದಿಲ್ಲವಲ್ಲ—ನೀನು, ಪ್ರೀತಿಯಿಂದ—

ಹೆಲ್ಮರ್:—ಏನು ಹೇಳು ?

ನೋರಾ:—(ಅವನ ಅಂಗಿಯ ಗುಂಡಿಗಳನ್ನು ತಿರುಗಿಸುತ್ತಾ ಮುಖವನ್ನು ತಗ್ಗಿಸಿಕೊಂಡು) ನೀನು ಬಲವಂತದಿಂದ ನನಗೆ ಏನನ್ನಾದರೂ ಕೊಡಲೇ ಬೇಕೆಂದಿದ್ದರೆ—ಇದ್ದರೆ—

ಹೆಲ್ಮರ್:—ಯಾಕೆ ಸಂಕೋಚ ? ಹೇಳು.

ನೋರಾ:—(ಬೇಗಬೇಗನೆ ಮಾತನ್ನಾಡುತ್ತಾ) ಹಣವನ್ನೇ ಕೊಟ್ಟು ಬಿಡು, ತೊರ್ವಾಲ್ಡ್. ನಿನ್ನ ಕೈಲಿ ಎಷ್ಟಾಗುತ್ತದೆಯೊ ಅಷ್ಟು ! ಎಂದಾದರೂ ಒಂದುದಿನ ನನಗೆ ಬೇಕಾದ್ದನ್ನು ಕೊಂಡು ಕೊಳ್ಳುತ್ತೇನೆ.

ಹೆಲ್ಮರ್:—ಅದು ಸರಿ, ನೋರಾ-ಆದರೆ ?

ನೋರಾ:—ಪ್ರಿಯ, ತೊರ್ವಾಲ್ಡ್, ನಾನು ಹೇಳಿದಹಾಗೆ ಮಾಡು. ದಯವಿಟ್ಟು ನನ್ನ ಮಾತನ್ನು ನಡಸಿಕೊಡು. ದಯವಿಟ್ಟು ಆ ಹಣವನ್ನು ರೇಷ್ಮೆವಸ್ತ್ರದಲ್ಲಿ ಕಟ್ಟಿ ಹಬ್ಬದ ಗಿಡದ ರೆಂಬೆಯೊಂದಕ್ಕೆ ಕಟ್ಟಿರುತ್ತೇನೆ. ಅದೂ ಒಂದು ಷೋಕಾಗಿರುತ್ತದೆ.

ಹೆಲ್ಮರ್:—ಸದಾ ದುಡ್ಡು ಹಾಳುಮಾಡುವ ಚಿಕ್ಕಮಕ್ಕಳನ್ನೇನೆಂದು ಕರೆಯುತ್ತಾರೆ ಬಲ್ಲೆಯಾ ?

ನೋರಾ:—ದಂದರ ಹಾಳಿ ? ಬಲ್ಲೆ ಅದಿರಲಿ, ನೀನು ಕೊಡುವುದನ್ನು ಕೊಡು ತೊರ್ವಾಲ್ಡ್, ಆಮೇಲೆ ನಿಧಾನವಾಗಿ ಯೋಚಿಸಿ ನನಗೆ ಬೇಕಾದ್ದನ್ನು ಕೊಂಡುಕೊಳ್ಳುತ್ತೇನೆ. ಅದು ಬುದ್ಧಿವಂತರ ಮಾರ್ಗವಲ್ಲವೆ ? ಹೇಳು.

ಹೆಲ್ಮರ್:—(ಮಂದಸ್ಮಿತನಾಗಿ) ಹೌದು, ಒಪ್ಪಿದೆ.— ನಾನು ಈಗ ಕೊಡುವ ಹಣವನ್ನು ಒಪ್ಪವಾಗಿಟ್ಟುಕೊಂಡಿದ್ದು ನಿನಗೆ ನಿಜವಾಗಿಯೂ ಬೇಕಾದ್ದನ್ನೇನಾದರೂ ಕೊಳ್ಳುವುದಾದರೆ, ಅದು

ಬಿಟ್ಟು ಮನೆಖರ್ಚಿಗೂ ಉಪಯೋಗವಿಲ್ಲದ ಎಷ್ಟೋ ಪದಾರ್ಥಕ್ಕೂ ಆ ಹಣವನ್ನೆಲ್ಲಾ ತೀರಿಸಿಬಿಟ್ಟರೆ ನಾನು ಪುನಃ ತೆರಬೇಕಾಗುವುದು.

ನೋರಾ:—ಬಿಡು, ಬಿಡು—ತೊರ್ವಾಲ್ಡ್....?

ಹೆಲ್ಮರ:—ನಾನು ಹೇಳುವುದು ಸುಳ್ಳೆ? ನನ್ನ ಪ್ರೀತಿಯ ಪುಟ್ಟ ಹುಡುಗಿ; (ಅವಳ ಸೊಂಟದ ಸುತ್ತ ಕೈ ಹಾಕಿಕೊಂಡು) ನನ್ನ ಪುಟ್ಟ ಪ್ರೇಮದ ನಿಧಿ ಇದು—ಆದರೆ ದುಡ್ಡು ಮಾತ್ರ ತುಂಬಾ ಹಾಳುಮಾಡುತ್ತದೆ. ಪುಟ್ಟಹುಡುಗಿಯರು ಈ ಪಾಟಿ ದುಡ್ಡು ನುಂಗುವರೆಂದು ಯಾರು ತಾನೇ ನಂಬಬಹುದು!

ನೋರಾ:—ಸಾಕು. ಸಾಕು. ಈ ಅನ್ಯಾಯದ ಮಾತು. ನಿಜವಾಗಿಯೂ ನಾನು ಎಷ್ಟು ಒಪ್ಪವಾಗಿ ಸಂಸಾರ ಮಾಡುತ್ತೇನೆ!

ಹೆಲ್ಮರ್:—(ನಗುತ್ತಾ) ಅಹಹಾ! ನಿನ್ನ ಒಪ್ಪವೋ, ನೀನೋ!

ನೋರಾ:—(ಸಂತೋಷದಿಂದ ಹುಸಿನಗೆಗೂಡಿ) ತೊರ್ವಾಲ್ಡ್, ನಮ್ಮಂಥ ಹಕ್ಕಿಗಳಿಗೂ, ಅಳಿಲುಗಳಿಗೂ ಏನೇನು ಖರ್ಚಿದೆಯೋ ನಿನಗೆ ಹೇಗೆ ತಿಳಿಯಬೇಕು?

ಹೆಲ್ಮರ್:—ನೀನು ಒಂದು ವಿಚಿತ್ರದ ಹುಡುಗಿ. ನಿನ್ನ ತಂದೆಯ ಹಾಗೇ. ನನ್ನಿಂದ ದುಡ್ಡು ಕಸಿದುಕೊಳ್ಳುವುದಕ್ಕೆ ಏನಾದರೂ ಹೊಸ ಹೊಸ ಉಪಾಯಗಳನ್ನು ಹುಡುಕುತ್ತೀಯೆ. ದುಡ್ಡು ಸಿಕ್ಕಿದೊಡನೆಯೆ ಅದು ನಿನ್ನ ಕೈಲಿ ಕರಗಿ ಹೋಗುತ್ತದೆ. ಎಲ್ಲಿ ಮಾಯವಾಯಿತೋ ನೀನು ಬೇರೆ ಕಾಣೆ, ಅದು ನಿನ್ನ ಹುಟ್ಟುಗುಣ! ಏನುಮಾಡುವುದು? ಆ ಚಾಳಿ ನಿನ್ನ ಮೂಳೆಗೇ ಅಂಟಿಕೊಂಡಿರಬೇಕು. ಹೆತ್ತವರ ಗುಣಗಳು ಮಕ್ಕಳಲ್ಲಿಯೂ ಸಹಜವಾಗಿರುತ್ತವೆಯಲ್ಲವೆ, ನೋರಾ?

ನೋರಾ:—ನಮ್ಮ ತಂದೆಯ ಕೆಲವು ಗುಣಗಳು ನನಗೆ ಬಂದಿದ್ದರೆ–

ಹೆಲ್ಮರ್:—ನೀನು ಈಗ ಹೇಗೆ ಇದ್ದೀಯೋ ಹಾಗೆಯೇ ಇರು. ನನ್ನ ಪುಟ್ಟಹಕ್ಕಿ! ಅದೇ ನನಗೆ ಸಂತೋಷ. ತಿಳಿಯಿತೆ?

ಅದು ಸರಿ, ಈ ಪೊತ್ತು ನಿನ್ನನ್ನು ನೋಡಿದರೆ ಏನೋ ಮನಸ್ಸಿನಲ್ಲಿ,-ಏನು ಹೇಳಲಿ,-ಏನೋ ಯೋಚನೆಇರುವಂತಿದೆ.

ನೋರಾ:—ಹಾಗೇನು ?

ಹೆಲ್ಮರ್:—ನನಗೇನೋ ಹಾಗೆ ತೋರುತ್ತೆ. ಎಲ್ಲಿ ಮತ್ತೆ ನನ್ನನ್ನು ದೃಷ್ಟಿಸಿ ನೋಡು !

ನೋರಾ:--(ನೋಡುತ್ತಾ) ಆಯಿತು.

ಹೆಲ್ಮರ್ :—(ಬೆರಳನ್ನು ಅಲ್ಲಾಡಿಸುತ್ತ) ಸೌ|| ಮಿಠಾಯಿಬಾಯಿ ಅಂಗಡಿಬೀದಿಯಲ್ಲಿ ಈ ಪೊತ್ತು ಕಟ್ಟಳೆ ಮೀರಿ ನಡೆಯಲಿಲ್ಲವೆ?

ನೋರಾ:—ಇಲ್ಲ ! ಯಾವ ಕಾರಣದಿಂದ ಹಾಗೆ ಹೇಳುತ್ತೀ ?

ಹೆಲ್ಮರ್:—ಮಿಠಾಯಿ ಅಂಗಡಿಗೆ ಈ ಪೊತ್ತು ಹೋಗಲಿಲ್ಲವೆ ?

ನೋರಾ:—ಇಲ್ಲ—ತೋರ್ವಾಲ್ಡ್—ಇಲ್ಲ, ನಿಜವಾಗಿಯೂ—

ಹೆಲ್ಮರ್:—ಮಿಠಾಯಿಯ ರುಚಿಯನ್ನು ನೋಡಲಿಲ್ಲವೆ ?

ನೋರಾ:—ಇಲ್ಲ—ಖಂಡಿತವಾಗಿಯೂ ಇಲ್ಲ.

ಹೆಲ್ಮರ್:—ಒಂದು ಚೂರು ಸಕ್ಕರೆ ಮಿಠಾಯಿ ?

ನೋರಾ:—ಇಲ್ಲ—ತೊರ್ವಾಲ್ಡ್—ಇಲ್ಲ—ಸತ್ಯವಾಗಿಯೂ ಇಲ್ಲ— (ಕಣ್ಣೀರು ಹಾಕುವುದರಲ್ಲಿರುವಳು)

ಹೆಲ್ಮರ್:—ನೋಡಿದೆಯಾ ! ನೋಡಿದೆಯಾ ! ನಾನು ಸುಮ್ಮನೆ ತಮಾಷೆಮಾಡುತ್ತಿದ್ದೆ.

ನೋರಾ:—(ಬಲಗಡೆ ಇರುವ ಮೇಜಿನ ಕಡೆಗೆ ಹೋಗುತ್ತಾ) ನಿನ್ನ ಮಾತಿಗೆ ವಿರುದ್ಧವಾಗಿ ಕನಸಿನಲ್ಲಿಯೂ ನಡೆಯುವವಳಲ್ಲ.

ಹೆಲ್ಮರ್:—ಅದು ನನಗೆ ಚೆನ್ನಾಗಿ ಗೊತ್ತು. ಅಲ್ಲದೆ ನೀನು ನನಗೆ ಮಾತು ಬೇರೆ ಕೊಟ್ಟಿದ್ದೀಯೆ (ಅವಳ ಹತ್ತಿರ ಸರಿದು) ಈ ಹಬ್ಬದ ಗುಟ್ಟನ್ನೆಲ್ಲಾ ನೀನೇ ಇಟ್ಟುಕೊಂಡಿರು. ಹಬ್ಬದ ಗಿಡವನ್ನು ಶೃಂಗರಿಸಿ ದೀಪದ ತೋರಣಗಳಿಂದ ಅಲಂಕರಿಸಿದ ಮೇಲೆ ಗೊತ್ತಾಗಿಯೇ ಆಗುತ್ತದೆ.

ನೋರಾ:—ಡಾಕ್ಟರ್ ರ್ಯಾಂಕ್‌ನನ್ನು ಕರೆದಿದ್ದೀಯೆ ತಾನೆ ?

ಹೆಲ್ಮರ್:—ಇಲ್ಲ, ಕರೆಯಬೇಕಾದ್ದೇನು ? ಊಟಕ್ಕೆ ಬರುತ್ತಾನಲ್ಲ ಬೆಳಿಗ್ಗೆ ಎಂದಿನಂತೆ. ಆಗ ಹೇಳಿದರಾಯಿತು. ಒಳ್ಳೇ 'ವೈನಿ'ಗೆ ಹೇಳಿ ಕಳುಹಿಸಿದ್ದೇನೆ. ನೋರಾ, ಸಂಜೆ ಎಷ್ಟು ಹೊತ್ತಿಗೆ ಬಂದೀತೋ ಎಂದು ಹೇಗೆ ಕಾದಿದ್ದೇನೆ ಬಲ್ಲೆಯಾ ?

ನೋರಾ:—ನಾನೂ ! ತೊರ್‍ವಾಲ್ಡ್, ಮಕ್ಕಳ ಸಂತೋಷಕ್ಕೋ ಪಾರವೇ ಇರುವುದಿಲ್ಲ.

ಹೆಲ್ಮರ್:—'ಖಾಯಂ' ಕೆಲಸ, ಕೈತುಂಬಸಂಬಳ ಎರಡೂ ಇದ್ದವನು ಏನು ಪುಣ್ಯವಂತ ! ಅದನ್ನು ನೆನಸಿಕೊಂಡರೇ ಒಂದು ಆನಂದ ! ಅಲ್ಲವೆ ?

ನೋರಾ:—ಆ ಸೊಗಸೇ ಸೊಗಸು !

ಹೆಲ್ಮರ್:—ಹೋದ ವರ್ಷ ಇದೇ ಕ್ರಿಸ್ಮಸ್ ಜ್ಞಾಪಕವಿದೆಯೆ ? ಹಬ್ಬಕ್ಕೆ ಮುಂಚಿತವಾಗಿ ಮೂರು ವಾರಗಳು ನೀನು ನಿನ್ನ ಚಿಕ್ಕಮನೆ ಬಾಗಿಲು ಹಾಕಿಕೊಂಡು ಅರ್ಧರಾತ್ರಿ ಕಳೆದ ಮೇಲೂ ಹಬ್ಬದ ಗಿಡದ ಅಲಂಕಾರಕ್ಕೋಸ್ಕರವಾಗಿ ಸಾಮಾನುಗಳನ್ನು ಸಿದ್ಧಪಡಿಸುತ್ತಾ ಮತ್ತು ನಮಗೆಆಶ್ಚರ್ಯ ವನ್ನುಂಟುಮಾಡುವ ಉಡುಗೆರೆಗಳನ್ನು ತಯಾರುಮಾಡುತ್ತಾ ಕಷ್ಟಪಟ್ಟು ನೀನು ಕೆಲಸಮಾಡಲಿಲ್ಲವೆ ? ಆ ಮೂರು ವಾರ ಗಳಿಷ್ಟು ಬೇಸರ—ಈ ಜನ್ಮದಲ್ಲೇ ಆಗಿರಲಿಲ್ಲ ನನಗೆ.

ನೋರಾ:—ನನಗೇನೋ ಬೇಸರವಾಗಲಿಲ್ಲ.

ಹೆಲ್ಮರ್:—(ಹುಸಿನಗುವಿನೊಡನೆ) ಆ ಕಷ್ಟಕ್ಕೆ ತಕ್ಕ ಫಲವೇನೂ ಆಗಲಿಲ್ಲ. ಏನು ಹೇಳು ನೋರಾ !

ನೋರಾ:—ಪದೇ ಪದೇ ಆ ವಿಷಯದಲ್ಲಿ ನನ್ನನ್ನು ನೀನು ಹಂಗಿಸ ಕೂಡದು. ಬೆಕ್ಕು ಒಳಕ್ಕೆ ನುಗ್ಗಿ ಎಲ್ಲವನ್ನೂ ಚೂರು ಚೂರಾಗಿ ಮಾಡಿಬಿಡುತ್ತೆಂದು ಯಾರಿಗೆ ಗೊತ್ತಿತ್ತು.

ಹೆಲ್ಮರ್:—(ವ್ಯಂಗ್ಯವಾಗಿ) ಯಾರಿಗೆ ಗೊತ್ತಿತ್ತು? ಪುಟ್ಟಹುಡುಗಿ. ನಮ್ಮನ್ನೆಲ್ಲಾ ಸಂತೋಷಪಡಿಸಬೇಕೆಂದು ಇದ್ದೆಯಲ್ಲ? ಅದೀಗ ಮುಖ್ಯ! ಏನಾದರೂ ಆಗಲಿ ನಮ್ಮ ಕಷ್ಟಕಾಲ ಮುಗಿಯಿತಲ್ಲ! ಅದೇ ನಮ್ಮ ಅದೃಷ್ಟ.

ನೋರಾ:—ಅದೇ ನಮ್ಮ ಪುಣ್ಯ.

ಹೆಲ್ಮರ್:—ಈ ವರ್ಷ ನಾನು ಇಲ್ಲಿ ಒಬ್ಬನೇ ಕೂತು ಬೇಸರಪಡಬೇಕಾಗಿಲ್ಲ. ನೀನು ನಿದ್ದೆಗೆಟ್ಟು ಈ ಮುದ್ದು ಕಣ್ಣುಗಳನ್ನು ಹಾಳು ಮಾಡಿಕೊಂಡು ಪುಟ್ಟ ಕೈಗಳನ್ನು ಆಯಾಸಪಡಿಸಬೇಕಾದ್ದೂ ಇಲ್ಲ.

ನೋರಾ:—(ಸಂತೋಷದಿಂದ ಚಪ್ಪಾಳೆ ತಟ್ಟುತ್ತಾ) ಇಲ್ಲ-ತೊರ್ವಾಲ್ಡ್ ಅವಶ್ಯಕವಿಲ್ಲ. ಇನ್ನು ನಮಗೆ ಕಷ್ಟ ತಪ್ಪಿತು. ಅಲ್ಲವೆ? ನೀನೇ ಹೇಳು. ನಿನ್ನ ಬಾಯಿಂದ ಆ ಮಾತು ಕೇಳಬೇಕೆಂದು ಆಶೆ. (ಅವನ ತೋಳನ್ನು ಹಿಡಿದುಕೊಂಡು) ತೊರ್ವಾಲ್ಡ್ ನಾನು ಹೇಳುತ್ತೇನೆ ಕೇಳು. ಮುಂದೆ ನಮ್ಮ ಸಂಸಾರವನ್ನು ಯಾವರೀತಿ ನಡೆಸಿಕೊಂಡು ಬರಬೇಕೆಂದು. ಈ ಹಬ್ಬವಾದೊಡನೆ—(ಹೊರಗಡೆ ಹಜಾರದಲ್ಲಿ ಗಂಟೆಯ ದನಿ ಕೇಳಿಬರುವುದು.) ಗಂಟೆಯ ಶಬ್ದವಾಗುತ್ತಿದೆ. (ಚಿಕ್ಕಮನೆಯಲ್ಲಿರುವ ಸಾಮಾನುಗಳನ್ನು ಕ್ರಮವಾಗಿ ಸ್ವಸ್ಥಾನಗಳಲ್ಲಿಟ್ಟು) ಎಲ್ಲಿಯ ಪೀಡೆಯೋ!

ಹೆಲ್ಮರ್:—ಹೊಸಬರು ಯಾರಾದರೂ ಬಂದರೆ ನಾನು ಮನೆಯಲ್ಲಿಲ್ಲ-ತಿಳಿಯಿತೋ?

ಹೆಣ್ಣಾಳು:—(ಬಾಗಿಲಲ್ಲಿ ನಿಂತುಕೊಂಡು) ಯಾರೋ ಹೆಂಗಸರು ನಿಮ್ಮನ್ನು ನೋಡಲು ಬಂದಿದ್ದಾರೆ, ತಾಯಿ, ಹೊಸಬರು.

ನೋರಾ:—ಒಳಗೆ ಬರಹೇಳು.

ಹೆಣ್ಣಾಳು:—(ಹೆಲ್ಮರನನ್ನು ಕುರಿತು) ಡಾಕ್ಟರ್ ಕೂಡಾ ಅದೇ ಸಮಯಕ್ಕೆ ಸರಿಯಾಗಿ ಬಂದರು.

ಹೆಲ್ಮರ್:—ಡಾಕ್ಟರ್ ನನ್ನ ಚಿಕ್ಕಮನೆಗೆ ಹೋದರೇನು?

ಹೆಣ್ಣಾಳು:—ಹೌದು ಸ್ವಾಮಿ.

(ಹೆಲ್ಮರ್ ತನ್ನ ಕಿರುಮನೆಗೆ ಹೋಗುತ್ತಾನೆ. ಹೆಣ್ಣಾಳು ಮಿಸೆಸ್ ಲಿಂಡನ್ನು ಒಳಕ್ಕೆ ಕರೆತರುವಳು. ಮಿಸೆಸ್ ಪ್ರಯಾಣಕ್ಕೆ ಅರ್ಹವಾದ ಉಡುಪನ್ನು ಧರಿಸಿದ್ದಾಳೆ. ಹೆಣ್ಣಾಳು ಬಾಗಿಲು ಮುಚ್ಚಿಕೊಂಡು ಹೋಗುವಳು.)

ಮಿಸೆಸ್‌ಲಿಂಡ್:—(ಖಿನ್ನವಾದ ಮತ್ತು ಶಂಕೆಯಿಂದಕೂಡಿದ ದನಿಯಿಂದ)

ನೋರಾ, ಚೆನ್ನಾಗಿದ್ದೀಯಾ?

ನೋರಾ:—(ಅನುಮಾನದಿಂದ) ನೀನು?

ಲಿಂಡ್:—ಗುರುತು ಸಿಕ್ಕಲಿಲ್ಲವೆಂದು ಕಾಣುತ್ತೆ.

ನೋರಾ:—ಇಲ್ಲ—ಜ್ಞಾಪಕವಿಲ್ಲ. ಹೌದು, ತಾಳು ಮತ್ತೆ, ಎಲ್ಲೋ ಜ್ಞಾಪಕ—(ಥಟಕ್ಕನೆ) ಓಹೋ ಈಗ ಗೊತ್ತಾಯಿತು—ಕ್ರಿಸ್ಟೀನ್ ನಿಜವಾಗಿಯೂ ನೀನೇನೆಯೇ?

ಲಿಂಡ್:—ಹೌದು, ನಾನೇಯೆ.

ನೋರಾ:—ಕ್ರಿಸ್ಟೀನ್, ಕ್ರಿಸ್ಟೀನ್! ನಿನ್ನ ಗುರುತು ಹಿಡಿಯಲಾರದೆ ಹೋದೆನಲ್ಲಾ!—ಆದರೂ ಹೇಗೆತಾನೇ-(ಮೃದುವಾಗಿ ಮಾತನಾಡುತ್ತಾ) ನೀನು ಕೂಡ ಎಷ್ಟು ಬದಲಾಯಿಸಿದ್ದೀ ಕ್ರಿಸ್ಟೀನ್!

ಲಿಂಡ್:—ಹೌದು, ಎಷ್ಟೋ ಬದಲಾಯಿಸಿದ್ದೇನೆ. ಒಂಭತ್ತು-ಹತ್ತು ದೀರ್ಘ ವರ್ಷಗಳು—

ನೋರಾ:—ಒಬ್ಬರನ್ನೊಬ್ಬರು ನೋಡಿ ಅಷ್ಟು ಕಾಲವಾಯಿತೆ? ಇರಬೇಕು. ಕಳೆದ ಎಂಟು ವರ್ಷಗಳೂ ನನಗೆ ಸುಖವಾಗಿ ಕಳೆದುಹೋದವು ಕ್ರಿಸ್ಟೀನ್! ಅಂತೂ ಈ ಊರಿಗೆ ಬಂದೆ! ಈ ಚಳಿಗಾಲದಲ್ಲಿ ಎಷ್ಟು ದೂರ ಪ್ರಯಾಣ, ಅಬ್ಬ! ನೀನು ಬಹಳ ಗಟ್ಟಿಗಳಮ್ಮ.

ಲಿಂಡ್:—ಇವತ್ತು ಬೆಳಿಗ್ಗೆ ತಾನೇ ಹಡಗಿನಿಂದ ಇಳಿದದ್ದು.

ನೋರಾ:—ಹಬ್ಬದ ಸಮಯದಲ್ಲಿ ಈ ದೊಡ್ಡ ಪಟ್ಟಣದಲ್ಲಿ ವಿನೋದ ಪಡುವುದಕ್ಕೆ ತಾನೇ? ಎಷ್ಟು ಸೊಗಸು! ನಾವಿಬ್ಬರೂ ಜೊತೆ ಯಲ್ಲಿಯೇ ಎಲ್ಲಾ ತಮಾಷೆಗಳನ್ನೂ ನೋಡೋಣ! ಅಂಗಿ ಯನ್ನು ತೆಗೆ. ಚಳಿ ಇಲ್ಲತಾನೆ? (ಮೇಲಂಗಿಯನ್ನು ಬಿಚ್ಚಲು ಸಹಾಯಮಾಡುವಳು) ಬಾ, ಒಲೆಮುಂದೆ ಬೆಚ್ಚಗೆ ಕೂತುಕೋ ಅದು ಬೇಡ. ಈ ಮೆತ್ತೆ ಕುರ್ಚಿಯ ಮೇಲೆ ಕುಳಿತುಕೋ. ನಾನು ತೂಗಾಡುವ ಈ ಕುರ್ಚಿಯಮೇಲೆ ಇರುತ್ತೇನೆ. (ಮಿಸೆಸ್ ಲಿಂಡ್‌ಳ ಕೈಗಳನ್ನು ಹಿಡಿದುಕೊಂಡು) ಈಗ ನೀನು ಪೂರ್ವದಂತೆಯೇ ಕಾಣುತ್ತೀಯೆ, ನಿನ್ನನ್ನು ಕಂಡ ಕ್ಷಣದಲ್ಲಿ ಮಾತ್ರ ಗುರುತು ಸಿಕ್ಕಲಿಲ್ಲ-ಕ್ರಿಸ್ಟೀನ್ ನಿನ್ನ ಮುಖದಲ್ಲಿ ಸ್ವಲ್ಪ ಕಳೆ ಕಡಮೆಯಾದಂತೆ ಕಾಣುತ್ತದೆ. ಸ್ವಲ್ಪ ಕೃಶವಾಗಿಯೂ ಕಾಣುತ್ತೀಯೆ.

ಲಿಂಡ್:—ಅಷ್ಟೇ ಅಲ್ಲ. ವಯಸ್ಸೂ ಆಯಿತು, ನೋರಾ.

ನೋರಾ:—ಏನೋ ಸ್ವಲ್ಪ ವಯಸ್ಸು ಹೆಚ್ಚಾಗಿರಬಹುದು. ಸ್ವಲ್ಪ, ಅತಿಸ್ವಲ್ಪ, ಹೆಚ್ಚೇನೂ ಇಲ್ಲ. (ಹಾಗೆಯೇ ಥಟಕ್ಕನೆ ಮಾತನ್ನು ನಿಲ್ಲಿಸಿ ಗಂಭೀರವಾಗಿ) ಯೋಚನೆ ಇಲ್ಲದೆ ಏನೇನೋ ಹರಟು ತ್ತಿದ್ದೇನೆ. ಅಯ್ಯೋ ಪಾಪ! ಕ್ರಿಸ್ಟೀನ್, ನನ್ನನ್ನು ಕ್ಷಮಿಸು.

ಲಿಂಡ್:—ನಿನ್ನ ಮಾತಿಗರ್ಥವೇನು? ನೋರಾ.

ನೋರಾ:—(ಮೃದುದನಿಯಿಂದ) ಅಯ್ಯೋ! ಕ್ರಿಸ್ಟೀನ್, ನೀನು ವಿಧವೆ.

ಲಿಂಡ್:—ಹೌದು, ಮೂರು ವರ್ಷಗಳಾಯಿತು.

ನೋರಾ:—ಹೌದು, ತಿಳಿಯಿತು. ವರ್ತಮಾನ ಪತ್ರಿಕೆಯಲ್ಲಿ ಓದಿದ್ದೆ. ಕ್ರಿಸ್ಟೀನ್, ಎಷ್ಟೋಸಾರಿ ನಿನಗೆ ಕಾಗದವನ್ನು ಬರೆಯಬೇಕೆಂದು ಮನಸ್ಸು ಮಾಡಿದರೂ ಏನಾದರೂ ಅಡಚಣೆ ಬಂದು ಬರೆ ಯಲೇ ಇಲ್ಲ.

ಲಿಂಡ್:—ಹಾಗೆ ಆಗುತ್ತೆ ನೋರಾ!

ನೋರಾ:—ಆದರೂ ನಾನು ಬರೆಯದೆ ಇದ್ದದ್ದು ತಪ್ಪು, ಪಾಪ! ಎಷ್ಟು ದುಃಖಪಟ್ಟೆಯೋ! ಅವನು ಆಸ್ತಿಯನ್ನೇನೂ ಬಿಡಲಿಲ್ಲವಲ್ಲವೆ ?

ಲಿಂಡ್:—ಇಲ್ಲ.

ನೋರಾ:—ಮಕ್ಕಳೂ ಇಲ್ಲವೆ ?

ಲಿಂಡ್:—ಇಲ್ಲ.

ನೋರಾ:—ಹಾಗಾದರೆ ಏನೂ ಇಲ್ಲ ?

ಲಿಂಡ್:—ಮನಸ್ಸಮಾಧಾನಕ್ಕೆ ದುಃಖ ಕೂಡಾ ಇಲ್ಲ.

ನೋರಾ:—(ಅವಳ ಮಾತುಗಳನ್ನು ನಂಬಲಾರದೆ) ಕ್ರಿಸ್ಟೀನ್, ಆದು ಹೇಗೆ ಸಾಧ್ಯ ?

ಲಿಂಡ್:—(ಖಿನ್ನಯುಕ್ತವಾದ ನಗುವಿನೊಡಗೂಡಿ ತಲೆಯ ಕೂದಲನ್ನು ಸರಿಪಡಿಸಿಕೊಳ್ಳುತ್ತಾ) ನೋರಾ ಹಾಗೂ ಹಾಗುವುದುಂಟು !

ನೋರಾ:—ಹಾಗಾದರೆ ನೀನು ಒಬ್ಬೊಂಟಿಗಳಾಗಿದ್ದೀಯೆ ! ಪಾಪ ಏನು ಕಷ್ಟ ಬಂತಮ್ಮ! ನನಗೆ ಮೂರು ಮುದ್ದು ಮಕ್ಕಳಿವೆ. ದಾದಿಯೊಡನೆ ಆಟಕ್ಕೆ ಹೊರಗೆ ಹೋಗಿವೆ. ಆದ್ದರಿಂದ ನೀನು ಅವುಗಳನ್ನು ಈಗ ನೋಡುವುದಕ್ಕಾಗುವುದಿಲ್ಲ. ಎಲ್ಲಿ, ನಿನ್ನ ಸಂಗತಿಯೆಲ್ಲಾ ಹೇಳು ನನಗೆ.

ಲಿಂಡ್:—ಬೇಡ-ಬೇಡ-ನಿನ್ನ ಸಂಗತಿಯೆಲ್ಲಾ ಕೇಳಬೇಕು ನಾನು.

ನೋರಾ:—ಇಲ್ಲ. ನೀನು ಪ್ರಾರಂಭಿಸು, ನಾನು ಈಪೊತ್ತು ಸ್ವಾರ್ಥ ಪರೆಯಾಗಿರಕೂಡದು ; ಈ ಪೊತ್ತು ನಿನ್ನ ವಿಷಯ ಮಾತ ನಾಡೋಣ. ಒಂದು ಸಮಾಚಾರವನ್ನು ಮಾತ್ರ ತಿಳಿಸುತ್ತೇನೆ. ನಮಗೆ ದೊಡ್ಡದೊಂದು ಭಾಗ್ಯ ಒದಗಿದೆ, ನಿನಗೆ ಗೊತ್ತೆ ?

ಲಿಂಡ್:—ಇಲ್ಲ, ಅದೇನದು ?

ನೋರಾ:—ನನ್ನ ಗಂಡನಿಗೆ ಬ್ಯಾಂಕಿನಲ್ಲಿ ಮುಖ್ಯಾಧಿಕಾರಿಯ ಕೆಲಸವಾಗಿದೆ.

ಲಿಂಡ್:—ನಿನ್ನ ಗಂಡನಿಗೆ ? ಎಂಥಾ ಭಾಗ್ಯ !

ನೋರಾ:—ಹೌದು, ದೊಡ್ಡ ಭಾಗ್ಯ! ಲಾಯರಿನ ವರಮಾನ ನೆಚ್ಚಿಗೆಯಾದದ್ದಿಲ್ಲ ; ಅದರಲ್ಲಿಯೂ ಸಂಶಯಾಸ್ಪದರಾದ ಕಕ್ಷಿಗಾರರನ್ನು ದೂರಮಾಡಿದರೆ. ಹೆಲ್ಮರನು ಅಂಥಾ ಕಕ್ಷಿಗಾರರನ್ನು ಹತ್ತಿರ ಸೇರಿಸುವುದಿಲ್ಲ. ನನಗೂ ಅದು ಸರಿಯೆಂದೇ ತೋರುತ್ತೆ. ಆದ್ದರಿಂದ ಈ ಕೆಲಸ ಸಿಕ್ಕಿದ್ದು ನಮಗೆಷ್ಟು ಸಂತೋಷ ವುಂಟಾಗಿರಬಹುದೆಂದು ಯೋಚಿಸು. ಹೊಸ ವರ್ಷದ ಹಬ್ಬದದಿನ ಹೆಲ್ಮರು ಕೆಲಸಕ್ಕೆ ಸೇರುತ್ತಾನೆ. ಆ ಮೇಲೆ ಅವನಿಗೆ ಭಾರಿ ಸಂಬಳ ಮತ್ತು ಇತರ ವರಮಾನಗಳೂ ಸಲ್ಲುವುವು. ಇನ್ನುಮೇಲೆ ನಾವೂ ಕೂಡ ಸಂಸಾರವನ್ನು ಬೇರೆ ತರಹದಲ್ಲಿ ನಡೆಸಬಹುದು. ನನ್ನ ಮನಸ್ಸಿಗೆ ನಿಶ್ಚಿಂತೆಯಾಗಿದೆ. ಸಂತೋಷ ಉಕ್ಕುತ್ತಿದೆ. ಕ್ರಿಸ್ಟೀನ್, ಕೈತುಂಬಾ ದುಡ್ಡನ್ನಿಟ್ಟುಕೊಂಡು ಮನಸ್ಸಿನಲ್ಲಿ ಯಾವ ಯೋಚನೆಯೂ ಇಲ್ಲದಿರುವುದೂ ಸೊಗಸಲ್ಲವೆ ?

ಲಿಂಡ್:—ಹೌದು, ಸಂಸಾರಕ್ಕೆ ಸಾಕಾದಷ್ಟಿದ್ದರೆ ಸೊಗಸೇ ಸರಿ.

ನೋರಾ:—ಸಾಕಾದಷ್ಟೇ ಅಲ್ಲ! ರಾಶಿಯಮೇಲೆ ರಾಶಿ ಹಣ !

ಲಿಂಡ್:—ನೋರಾ-ನೋರಾ-ನಿನಗೆ ಇನ್ನೂ ಬುದ್ಧಿ ಬರಲಿಲ್ಲವೆ ? ಪಾಠಶಾಲೆಯಲ್ಲಿ ನಾವಿದ್ದಾಗಲೂ ಕೂಡ ನೀನು ದುಂದುಗಾತಿಯಾಗಿದ್ದೆ.

ನೋರಾ:—(ನಗುತ್ತಾ) ಹೌದು, ತೊರ್ವಾಲ್ಡನೂ ಅದೇ ಅನ್ನುತ್ತಾನೆ. (ಅವಳಕಡೆ ಬೆರಳನ್ನಾಡಿಸುತ್ತಾ) ಆದಾಗ್ಗೂ 'ನೋರಾ ನೋರಾ' ಅಷ್ಟು ಹುಚ್ಚಿಯಲ್ಲ. ನಾವುಗಳು ದುಂದುಖರ್ಚು ಮಾಡಲು ಶಕ್ತಿಯುಳ್ಳವರ ಅಂತಸ್ತಿನಲ್ಲಿರಲಿಲ್ಲ. ನಾವಿಬ್ಬರೂ ಕಷ್ಟಪಟ್ಟು ಕೆಲಸಮಾಡಬೇಕಾಗಿತ್ತು.

ಲಿಂಡ್:—ನೀನೂ ಕೂಡ ?

ನೋರಾ:—ಹೌದು, ಚಿಲ್ಲರೆ-ಪಲ್ಲರೆ ಕೆಲಸಗಳು ; ಹೊಲಿಗೆ, ಕಸೂತಿ, ಕಲಾಪತ್ತು ಹಾಕುವುದು, ಇತ್ಯಾದಿ, (ದನಿಯನ್ನು ತಗ್ಗಿಸಿ)

ಇನ್ನೂ ಕೆಲವು ಬೇರೆ ಕೆಲಸಗಳು. ನಿನಗೆ ಜ್ಞಾಪಕವಿರ ಬಹುದು, ಮದುವೆಯಾದೊಡನೆ ತೊರ್ವಾಲ್ಡನು 'ಆಫೀಸಿನ' ಕೆಲಸವನ್ನು ಬಿಟ್ಟುಬಿಟ್ಟ. ಯಾಕೆಂದರೆ ಮೊದಲಿಗಿಂತಲೂ ಹೆಚ್ಚಾಗಿ ಹಣವನ್ನು ಸಂಪಾದಿಸಬೇಕಾಗಿ ಬಂತು; ಮತ್ತು 'ಆಫೀಸಿ' ನಲ್ಲಿ ಸಂಬಳ ಬಡ್ತಿ ಆಗುವ ಸಂಭವವು ದೂರವಾಗಿತ್ತು. ನಮ್ಮ ಮದುವೆಯಾದ ವರ್ಷ ತನ್ನ ಶಕ್ತಿಮೀರಿ ಕೆಲಸ ಮಾಡಿದನು. ಏನಾದರೂ ಮಾಡಿ ಹೆಚ್ಚು ಹಣವನ್ನು ಸಂಪಾದಿಸಬೇಕಾಗಿ ಬಂತು. ಆದ್ದರಿಂದ ಹಗಲೂ ರಾತ್ರಿ ಪರಿಜ್ಞಾನವಿಲ್ಲದೆ ಕೆಲಸಮಾಡ ತೊಡಗಿದನು. ಎಷ್ಟು ದಿನ ಹಾಗೆ ಮಾಡಿಯಾನು? ಖಾಯಿಲೆ ಬಿದ್ದ. ವೈದ್ಯರು ಬಂದು ಪರೀಕ್ಷೆಮಾಡಿ ದಕ್ಷಿಣ ದೇಶಗಳಕಡೆ ಹವ ಬದಲಾಯಿಸುವು ದಕ್ಕೆ ಹೋಗುವುದು ಅವಶ್ಯಕವೆಂದು ಹೇಳಿದರು.

ಲಿಂಡ್:—ನೀವು ಒಂದು ವರ್ಷ ಇಟಲಿ ದೇಶದಲ್ಲಿರಲಿಲ್ಲವೆ?

ನೋರಾ:—ಹೌದು, ಸುಲಭವಾಗಿ ಹೊರಡುವುದಕ್ಕೆ ಆಯಿತೆ? ಆಗ ತಾನೆ ಐವರನು ಹುಟ್ಟಿದ್ದ. ತೊರ್ವಾಲ್ಡನ ಆರೋಗ್ಯಕ್ಕೋಸ್ಕರ ಹೋಗಲೇಬೇಕಾಗಿ ಬಂತು. ಚಿತ್ರ ವಿಚಿತ್ರಗಳನ್ನೆಲ್ಲಾ ನೋಡಿದೆವು. ತೊರ್ವಾಲ್ಡನ ಜೀವ ಉಳಿಯಿತು. ಆದರೆ, ಕ್ರಿಸ್ಟೀನ್, ಖರ್ಚೇ ಬಹಳ ದುಬಾರಿಯಾಯಿತು.

ಲಿಂಡ್:—ಅಲ್ಲವೇ ಮತ್ತೆ?

ನೋರಾ:—ಇನ್ನೂರು ಐವತ್ತು ಪೌಂಡು ಕೈಬಿಟ್ಟು ಹೋಯಿತು. ಸುಮ್ಮನೆ ಆಗುತ್ತೆಯೆ ಅಮ್ಮ?

ಲಿಂಡ್:—ಕೈಲಿ ದುಡ್ಡಿತ್ತಲ್ಲ, ಅದೇ ಒಂದು ಪುಣ್ಯ.

ನೋರಾ:—ನಮ್ಮ ತಂದೆ ಕಳುಹಿಸಿದ್ದು.

ಲಿಂಡ್:—ಹಾಗೇ? ಆಗಲೇ ಅಲ್ಲವೆ ನಿಮ್ಮ ತಂದೆ ಸತ್ತಿದ್ದು?

ನೋರಾ:—ಆ ಸಮಯದಲ್ಲಿ ಹೋಗಿ ನಮ್ಮ ತಂದೆಗೆ ಆರೈಕೆ ಮಾಡಲು ಕೂಡ ಆಗಲಿಲ್ಲ ನನಗೆ ಹೆಂಗೆ ಸಮಯ, ಮತ್ತು

ತೊರ್ವಾಲ್ಡನ ಖಾಯಿಲೆ, ಎರಡೂ ಸೇರಿತು. ಪುನಃ ತಂದೆಯ ಮುಖವೇ ಸಿಕ್ಕಲಿಲ್ಲ. ನಮ್ಮ ಮದುವೆಯಾದಮೇಲೆ ಅಂಥಾ ದುಃಖಕಾಲವು ಯಾವಾಗಲೂ ಒದಗಿರಲಿಲ್ಲ.

ಲಿಂಡ್:—ತಂದೆಯ ಮೇಲೆ ನಿನಗೆ ತುಂಬ ಪ್ರೀತಿ, ಗೊತ್ತು. ಆ ಮೇಲೆ ನೀವು ಇಟಲಿಗೆ ಪ್ರಯಾಣ ಬೆಳೆಸಿದಿರೊ ?

ನೋರಾ:—ಹೌದು, ಕೈಲಿ ಹಣವಿತ್ತು ; ಡಾಕ್ಟರುಗಳು ಹೋಗಿಯೇ ತೀರಬೇಕು ಅಂದರು. ಒಂದು ತಿಂಗಳಾದನಂತರ ಪ್ರಯಾಣವನ್ನು ಬೆಳೆಸಿದೆವು.

ಲಿಂಡ್:—ನಿನ್ನ ಗಂಡನು ಆರೋಗ್ಯವಂತನಾಗಿ ಹಿಂತಿರುಗಿದನು.

ನೋರಾ:—ಅವನ ದೇಹವು ಕಂಚಿನ ಗಂಟೆಯಂತಾಯಿತು.

ಲಿಂಡ್:—ಅದು ಸರಿ-ಡಾಕ್ಟರೋ ?

ನೋರಾ:—ಯಾವ ಡಾಕ್ಟರ್ ?

ಲಿಂಡ್:—ನಾನು ಇಲ್ಲಿಗೆ ಬರಲು ಸ್ವಲ್ಪ ಮುಂಚೆ ಬಂದ ಗೃಹಸ್ಥನು ಡಾಕ್ಟರ್ ಎಂದು ನಿನ್ನ ಗೌಡಿ ಹೇಳಿದಳು ಅಲ್ಲವೆ ?

ನೋರಾ:—ಹೌದು, ಅವನು ಡಾಕ್ಟರ್ ರ್‍ಯಾಂಕ್. ಅವನು ವೈದ್ಯಗಾರಿಕೆಯನ್ನು ನಡೆಸಲು ನಮ್ಮ ಮನೆಗೆ ಬರುವುದಿಲ್ಲ. ನಮ್ಮ ಆಪ್ತಸ್ನೇಹಿತ, ದಿನಕ್ಕೊಂದಾವರ್ತಿಯಾದರೂ ಬರುತ್ತಾನೆ. ಇಟಲಿಗೆ ಹೋದಾರಭ್ಯ ತೊರ್ವಾಲ್ಡನಿಗೆ ಖಾಯಿಲೆ ಸುದ್ದಿಯೇ ಇಲ್ಲ. ನಮ್ಮ ಮಕ್ಕಳೂ ಕೂಡ ದೃಢಕಾಯರಾಗಿಯೂ ಆರೋಗ್ಯವಾಗಿಯೂ ಇದ್ದಾರೆ. ನಾನೂ ಕೂಡ ಕಲ್ಲುಗುಂಡಾಗಿದ್ದೇನೆ. (ಚಿಮ್ಮಿಹಾರಿ ನಿಂತು ಚಪ್ಪಾಳೆ ಹೊಡೆದು) ಕ್ರಿಸ್ಟೀನ್, ಕ್ರಿಸ್ಟೀನ್, ಸಂತೋಷವಾಗಿ ಬದುಕಿರುವುದು ಏನು ಸುಖ !! ಇದೇನಿದು ? ಮರ್ಯಾದೆ ಇಲ್ಲದೆ ನನ್ನ ವಿಷಯವನ್ನೇ ಕೊಚ್ಚಿಕೊಳ್ಳುತ್ತಾ ಹರಟುತ್ತಿದೇನೆ. (ಅವಳ ಪಕ್ಕದಲ್ಲಿ ಕಾಲುಮಣೆಯಮೇಲೆ ಕುಳಿತುಕೊಂಡು) ನನ್ನಮೇಲೆ ಆಗ್ರಹ ಮಾಡಬೇಡ. ನಿಜವಾಗಿಯೂ ನಿನ್ನ ಗಂಡನನ್ನು ಪ್ರಿತಿಸಲಿಲ್ಲವೆ ? ಹಾಗಾದರೆ ಅವನನ್ನು ಯಾತಕ್ಕೆ ಮದುವೆಯಾದೆ ?

ಲಿಂಡ್:—ಆಗ ನನ್ನ ತಾಯಿ ಬದುಕಿದ್ದಳು; ಖಾಯಿಲೆಯಿಂದ ಹಾಸಿಗೆಯನ್ನು ಅಂಟಿದ್ದಳು; ನನ್ನಿಬ್ಬರು ತಮ್ಮಂದಿರ ವಿದ್ಯಾಭ್ಯಾಸವಾಗಬೇಕಾಗಿತ್ತು, ಆ ಸಂದರ್ಭದಲ್ಲಿ ಅವನು ಮಾಡಿದ ವಿವಾಹ ಪ್ರಾರ್ಥನೆಯನ್ನು ತಿರಸ್ಕಾರಮಾಡಲು ಸೂಕ್ತವಾಗಿ ಕಾಣಲಿಲ್ಲ.

ನೋರಾ:—ಅದೂ ಸರಿಯೇ ಅನ್ನಬೇಕು. ಆಗ ಅವನು ಐಶ್ವರ್ಯವಂತನಾಗಿದ್ದನೆ?

ಲಿಂಡ್:—ನೆಮ್ಮದಿಯಾಗಿದ್ದನೆಂದು ತೋರುತ್ತೆ. ಅವನದು ಸ್ವಲ್ಪ ಅಬಂಧನೆ ಕೆಲಸ, ಅವನು ಸತ್ತೊಡನೆ ಅವನ ಆಸ್ತಿಪಾಸ್ತಿಗಳೆಲ್ಲಾ ಚೆಲ್ಲಾಪಿಲ್ಲಿಯಾಗಿ ಹೋದವು. ನನಗೆ ಒಂದು ಕಾಸೂ ಉಳಿಯಲಿಲ್ಲ.

ನೋರಾ:—ಆಮೇಲೆ — ?

ಲಿಂಡ್:—ಏನು ಹೇಳಲಿ? ಯಾವಕೆಲಸ ಒದಗಿದರೆ ಅದೇ ಆಯಿತು. ಮೊದಲು ಒಂದು ಸಣ್ಣ ಅಂಗಡಿ, ಆಮೇಲೆ ಒಂದು ಸಣ್ಣ ಪಾಠಶಾಲೆ—ಹೀಗೇ, ಕಳೆದ ಮೂರು ವರ್ಷಗಳೂ ಒಂದು ಗಳಿಗೆಯೂ ಬಿಡುವಿಲ್ಲದೆ, ದುಡಿದು, ದುಡಿದು, ದುಡಿದು, ಒದ್ದಾಡಿಹೋದೆ. ಈಗ ಬಿಡುಗಡೆಯಾಯಿತು. ನನ್ನ ತಾಯಿ ತೀರಿಹೋದಳು. ನನ್ನ ತಮ್ಮಂದಿರಿಗೂ ಈಗ ನನ್ನ ಸಹಾಯಬೇಡ; ಕೆಲಸಗಳು ಸಿಕ್ಕಿವೆ, ಈಗ ತಮ್ಮ ಪಾಡು ತಾವು ನೋಡಿಕೊಳ್ಳುತ್ತಾರೆ.

ನೋರಾ:—ಈಗ ಮನಸ್ಸು ನಿಶ್ಚಿಂತೆಯಿಂದಿರಬೇಕಲ್ಲವೆ?

ಲಿಂಡ್:—ಹಾಗೆ ಹೇಳಲಾಗುವುದಿಲ್ಲ. ಈಗ ನನ್ನ ಜೀವನವು ವರ್ಣಿಸಲಾರದಷ್ಟು ಬರಿದಾಗಿದೆ. ನಾನು ಯಾರಿಗೆಂದು ಬದುಕಿರಬೇಕು? (ಎದ್ದು ನಿಂತುಕೊಂಡು) ಅದಕ್ಕೋಸ್ಕರವೇ ಆ ಹಳ್ಳಿಕೊಂಪೆಯಲ್ಲಿರಲಾರದೆ ಈ ಊರಿನಲ್ಲೇನಾದರೂ ಹೊಸ ಕೆಲಸ ಸಿಕ್ಕಬಹುದೆಂದು ಬಂದೆ. ಮನಸ್ಸು ಮರೆಯಿಸಿ

ಕೆಲಸ ಮಾಡಿಸತಕ್ಕ ಉದ್ಯೋಗ ಬೇಕು. ನನ್ನ ಪುಣ್ಯದಿಂದ ಅಂಥಾ ಕೆಲಸವೇನಾದರೂ ಸಿಕ್ಕಿದರೆ-ಯಾವುದಾದರೂ ಆಫೀಸಿನ ಕೆಲಸ...........

ನೋರಾ:—ಅಂಥಾ ಕೆಲಸವು ಬಹಳ ಆಯಾಸವನ್ನುಂಟುಮಾಡುತ್ತದೆ. ನೀನು ಆಗಲೇ ತುಂಬಾ ದಣಿದವಳಂತೆ ಕಾಣುತ್ತಿ. ನೀನು ಹವಾ ಬದಲಾವಣೆಗೋಸ್ಕರ ಬೇರೊಂದು ಆರೋಗ್ಯ ಸ್ಥಳಕ್ಕೆ ಹೋಗುವುದು ಒಳ್ಳೆಯದೆಂದು ತೋರುತ್ತೆ.

ಲಿಂಡ್:—(ಕಿಟಕಿಯ ಕಡೆಗೆ ಹೋಗುತ್ತಾ) ನನಗೆ ದುಡ್ಡು ಕೊಡುವ ಅಪ್ಪ ಒಬ್ಬನಿಲ್ಲ, ನೋರಾ.

ನೋರಾ:—(ಎದ್ದು ನಿಂತು) ಅಯ್ಯೋ—ಕೋಪಿಸಬೇಡವಮ್ಮ!

ಲಿಂಡ್:—(ಅವಳ ಹತ್ತಿರ ಸರಿದು) ನೀನು ಕೋಪಿಸಿಕೊಳ್ಳಬೇಡವಮ್ಮ. ನನ್ನಂಥಾ ಅವಸ್ಥೆಯಲ್ಲಿರುವವರಿಗೆ ಎಲ್ಲವೂ ಕಹಿಯಾಗಿಯೇ ತೋರುತ್ತೆ. ಯಾರಿಗೋಸ್ಕರ ಬದುಕಿರಬೇಕೋ ಕಾಣೆ. ಆದಾಗ್ಯೂ ಸದಾ ಕೆಲಸವನ್ನು ಹುಡುಕಿಕೊಂಡು ಹೋಗುತ್ತಿರಬೇಕು. ಬದುಕಿರಬೇಕಲ್ಲ ಎಂದು ಸ್ವಾರ್ಥಪರಳಾಗಿರಬೇಕಾಗುತ್ತೆ. ನಿಮ್ಮ ಬಾಳು ಚೆನ್ನಾಗಿ ಪರಿಣಮಿಸಿತೆಂದು ಕೇಳಿದಾಗ್ಗೆ, ನಿಮಗೋಸ್ಕರವಲ್ಲ, ನನಗೋಸ್ಕರವಾಗಿಯೇ ಎಷ್ಟೋ ಸಂತೋಷಪಟ್ಟೆ.—

ನೋರಾ:—ನಿನ್ನರ್ಥವೇನು? ಓಹೋ ತಿಳಿಯಿತು. ತೊರ್ವಾಲ್ಡನು ನಿನಗೇನಾದರೂ ಕೆಲಸವನ್ನು ಮಾಡಿಸಿಕೊಡಬಹುದೆಂದೊ?

ಲಿಂಡ್:—ಹೌದು, ಅದೇ ನನ್ನ ಮನಸ್ಸಿನಲ್ಲಿದ್ದುದು.

ನೋರಾ:—ಅವನು ಮಾಡಿಸಿಕೊಡಲೇಬೇಕು. ಆ ವಿಷಯವನ್ನು ನನಗೆ ಬಿಡು. ಸಮಯವರಿತು ಅದನ್ನು ಪ್ರಸ್ತಾಪ ಮಾಡುತ್ತೇನೆ. ಮೊದಲು ಅವನ ಮನಸ್ಸಿಗೆ ಸಂತೋಷಪಡಿಸತಕ್ಕದ್ದೊಂದನ್ನು ಯೋಚನೆಮಾಡಬೇಕು. ನಿನಗೆ ಸಹಾಯ ಮಾಡಲು ನನ್ನ ಮನಸ್ಸಿಗೂ ಬಹಳ ಆನಂದವುಂಟಾಗುವುದು.

ಲಿಂಡ್:—ನಿನ್ನ ಮನಸ್ಸಿನ ಕರುಣವೆಷ್ಟಿರಬೇಕು! ಜೀವನದ ತೊಂದರೆಗಳ ಹೊರೆಯನ್ನರಿಯದ ನೀನು ನನಗೆ ಸಹಾಯ ಮಾಡುವುದು ಮತ್ತೂ ಸ್ತೋತ್ರಾರ್ಹವಾಗಿರುವುದು.

ನೋರಾ:—ನಾನೆ? ನಾನು ಅರಿಯಳೆಂದೇ?

ಲಿಂಡ್:—(ಹುಸಿನಗೆಯಿಂದ) ಸಣ್ಣ ಪುಟ್ಟ ಗೃಹಕೃತ್ಯದ ತೊಂದರೆಗಳಿರಬಹುದು! ನೀನು ಶುದ್ಧ ಹುಡುಗಿ, ನೋರಾ!

ನೋರಾ:—(ತಲೆಯನ್ನು ಎತ್ತಿಕೊಂಡು ಬೇರೆ ಕಡೆಗೆ ಬಂದು) ನೀನು ಅಷ್ಟು ಹೆಮ್ಮೆ ಪಡಬಾರದು.

ಲಿಂಡ್:—ಬಾರದೇ?

ನೋರಾ:—ಎಲ್ಲರಂತೆಯೇ ನೀನೂ ಕೂಡ! ಎಲ್ಲರೂ ನಾನು ಸಂಸಾರದ ಸೆಲೆಯನ್ನೇ ಅರಿತವಳಲ್ಲವೆಂದು...!

ಲಿಂಡ್:—ಹೋಗಲಿ, ಬಿಡು, ಬಿಡು,—

ನೋರಾ:—ಪ್ರಪಂಚದಲ್ಲಿ ಯಾವಕಷ್ಟವನ್ನೂ ಅನುಭವಿಸಿಲ್ಲವೆಂದು!

ಲಿಂಡ್:—ನಿನ್ನ ಕಷ್ಟಸುಖಗಳನ್ನೆಲ್ಲಾ ಈಗತಾನೇ ಹೇಳಿದೆಯಲ್ಲ, ನೋರಾ?

ನೋರಾ:—ಓ-ಅವುಗಳೆ? ಪುರಳೆಗಳು! (ಮೆತ್ತನೆ) ಮುಖ್ಯವಾದ ಒಂದು ವಿಷಯವನ್ನು ನಿನಗೆ ಹೇಳಲಿಲ್ಲ.

ಲಿಂಡ್:—ಮುಖ್ಯ ವಿಷಯ? ಹಾಗೆಂದರೆ?

ನೋರಾ:—ಕ್ರಿಸ್ಟೀನ್, ನನ್ನನ್ನು ಕೀಳಾಗಿ ಎಣಿಸುತ್ತೀಯೆ, ಹಾಗೆ ಮಾಡಬಾರದು. ನಿನ್ನ ತಾಯಿಗೋಸ್ಕರ ಅಷ್ಟು ದಿವಸ ಕಷ್ಟಪಟ್ಟೆಯೆಂದು ನಿನಗೆ ಹೆಮ್ಮೆಯಲ್ಲವೆ?

ಲಿಂಡ್:—ಒಳ್ಳೇ ಮಾತನ್ನಾಡಿದೆ! ನಾನು ಯಾರನ್ನೂ ಕೀಳಾಗಿ ಕಾಣುವುದಿಲ್ಲ. ಆದರೆ ನನ್ನ ತಾಯಿಯ ಅಂತ್ಯಕಾಲದಲ್ಲಿ ಯಾವ ಕುಂದುಕೊರತೆಗಳೂ ಇಲ್ಲದಂತೆ ನಾನು ಮಾಡಿದ್ದಕ್ಕೆ ಮನಸ್ಸಿನಲ್ಲಿ ನಿಜವಾಗಿಯೂ ಸಂತೋಷವೂ, ಸ್ವಲ್ಪ ಹೆಮ್ಮೆಯೂ ಇದೆ.

ನೋರಾ:—ನಿನ್ನ ತಮ್ಮಂದಿರಿಗೆ ಮಾಡಿದ ಸಹಾಯಕ್ಕೂ ಜಂಭಪಿರ ಬಹುದು.

ಲಿಂಡ್:—ಆ ಹಕ್ಕನ್ನೂ ಸಂಪಾದಿಸಲಿಲ್ಲವೆ?

ನೋರಾ:—ಹೌದು, ನಿನಗೆ ಹಕ್ಕಿದೆ. ಈಗ ಕೇಳು-ಸಂತೋಷಕ್ಕೂ ಜಂಭಕ್ಕೂ ನನ್ನದೊಂದು ವಿಷಯವಿದೆ.

ಲಿಂಡ್:—ಇರಬೇಕೆಂದು ನಂಬುತ್ತೇನೆ. ಯಾವ ವಿಷಯ?

ನೋರಾ:—ಮೆತ್ತಗೆ ಮಾತಾಡು; ತೊರ್ವಾಲ್ಡನಿಗೆ ಕೇಳಿಸೀತು! ನಿನ್ನೊಬ್ಬಳ ಹೊರತು-ಏನೇ ಆಗಲಿ-ಈ ವಿಷಯ ಮತ್ತೊಬ್ಬರ ಕಿವಿಗೆ ಬೀಳಕೂಡದು.

ಲಿಂಡ್:—ಅದೇನದು ?

ನೋರಾ:—ಇಲ್ಲಿಬಾ (ಅವಳನ್ನು ಎಳೆದು ಮತ್ತೆ ಕುರ್ಚಿಯ ಮೇಲೆ ಕೂರಿಸಿಕೊಳ್ಳುತ್ತಾಳೆ.) ಸಂತೋಷಕ್ಕೂ, ಜಂಭಕ್ಕೂ ಕಾರಣವಾದ ವಿಷಯವೊಂದಿದೆಯೆಂದು ನಿನಗೆ ತೋರಿಸುತ್ತೇನೆ. ತೊರ್ವಾಲ್ಡನ ಪ್ರಾಣವನ್ನು ಉಳಿಸಿದವಳು ನಾನು.

ಲಿಂಡ್:—ಉಳಿಸಿದವಳು ! ಹೇಗೆ ?

ನೋರಾ:—ನಾವುಗಳು ಇಟಲಿಗೆ ಹೋದಸಂಗತಿ ಹೇಳಿದೆನಲ್ಲ! ನಾವು ಅಲ್ಲಿಗೆ ಹೋಗದಿದ್ದರೆ ತೊರ್ವಾಲ್ಡನಿಗೆ ಖಾಯಿಲೆ ವಾಸಿಯಾಗುತ್ತಲೇ ಇರಲಿಲ್ಲ.—

ಲಿಂಡ್:—ಸರಿ-ಗೊತ್ತು, ಅದಕ್ಕಾಗಿ ನಿಮ್ಮ ತಂದೆ ಹಣವನ್ನೊದಗಿಸಿದನು.

ನೋರಾ:—(ಮಂದಹಾಸದಿಂದ) ಹೌದು, ತೊರ್ವಾಲ್ಡನೂ, ಇತರರೂ ಹಾಗೆಯೇ ತಿಳಿದುಕೊಂಡಿದಾರೆ ; ಆದರೆ ...

ಲಿಂಡ್:—ಆದರೆ ?

ನೋರಾ:—ನಮ್ಮಪ್ಪ ಒಂದು ಕಾಸೂ ಕೊಡಲಿಲ್ಲ. ನಾನೇ ಹಣವನ್ನು ಸಂಗ್ರಹಿಸಿದೆ.

ಲಿಂಡ್:—ನೀನು! ಅಷ್ಟು ಮೊತ್ತವನ್ನು!

ನೋರಾ:—ಇನ್ನೂರೈವತ್ತು ಪೌಂಡುಗಳು! ಈಗೇನು ಹೇಳುವೆ?

ಲಿಂಡ್:—ಅಲ್ಲ,-ನೋರಾ, ಅದು ಹೇಗೆ ಸಾಧ್ಯವಾಯಿತು, ನಿನ್ನ ಕೈಯಲ್ಲಿ? ಲಾಟರಿಯಲ್ಲಿ ಏನಾದರೂ ದುಡ್ಡು ಬಂತೆ?

ನೋರಾ:—(ತಿರಸ್ಕಾರದಿಂದ) ಲಾಟರಿಯಲ್ಲಿ? ಅದರಿಂದೇನು ಗೌರವ?

ಲಿಂಡ್:—ಹಾಗಾದರೆ ಹಣವೆಲ್ಲಿ ಸಿಕ್ಕಿತು?

ನೋರಾ:—(ಸಂಗೀತದ ಮಟ್ಟೊಂದನ್ನು ಕುರುಗುಟ್ಟುತ್ತಾ—ನಗುತ್ತಾ) ಆಹಾ! ಆಹಾಹ! ಹುಂ!

ಲಿಂಡ್:—ಯಾಕೆಂದರೆ, ನೀನು ಸಾಲ ತಂದಿರಲಾರೆ!

ನೋರಾ:—ತಂದಿರಲಾರೆ? ಯ್ಯಾಕೆ?

ಲಿಂಡ್:—ಇಲ್ಲ, ಗಂಡನ ಸಮ್ಮತಿಯಿಲ್ಲದೆ ಹೆಂಡತಿ ಸಾಲಮಾಡ ಕೂಡದಲ್ಲ.

ನೋರಾ:—(ತಲೆಯನ್ನೆತ್ತಿಕೊಂಡು) ಓ! ಆ ಹೆಂಡತಿಗೆ ವ್ಯವಹಾರ ಜ್ಞಾನವಿದ್ದರೆ? ಅವಳು ಚತುರೆಯಾಗಿರಲು ಬುದ್ಧಿಯಿದ್ದರೆ-?

ಲಿಂಡ್:—ನೀನು ಹೇಳುವುದು ಅರ್ಥವೇ ಆಗುವುದಿಲ್ಲ!

ನೋರಾ:—ಅರ್ಥವಾಗಲೂ ಬೇಡ, ನಾನು ಸಾಲಮಾಡಿದೆನೆಂದು ನಾನು ಹೇಳಲೂ ಇಲ್ಲ. ಬೇರೆ ವಿಧವಾಗಿ ಹಣ ಒದಗಿರ ಬಹುದು. (ಮೆತ್ತೆಕುರ್ಚಿಯಮೇಲೆ ಮಲಗಿಕೊಂಡು) ನನ್ನನ್ನು ಮೆಚ್ಚಿದವನು ಯಾರಾದರೂ ಹಣವನ್ನು ಕೊಟ್ಟಿರಬಹುದು. ನನ್ನಂತಹ ರೂಪವತಿ—

ಲಿಂಡ್:—ನಿನಗೆ ಹುಚ್ಚು ಹಿಡಿದಂತೆ ತೋರುವುದು.

ನೋರಾ:—ವಿಷಯವನ್ನು ತಿಳಿದುಕೊಳ್ಳಬೇಕೆಂದು ನಿನಗೆ ನಿಜವಾಗಿಯೂ ಕುತೂಹಲವಿದೆ ಅಲ್ಲವೆ?-ಹೇಳು-ಕ್ರಿಸ್ಟೀನ್!

ಲಿಂಡ್:—ನೋರಾ, ನನ್ನಮಾತು ಕೇಳು, ನೀನು ಸ್ವಲ್ಪ ಅವಿವೇಕ ಮಾಡಿದೆಯಲ್ಲವೆ?

ನೋರಾ:—(ಕುಳಿತುಕೊಂಡು) ಗಂಡನ ಪ್ರಾಣವನ್ನುಳಿಸುವುದು ಅವಿವೇಕವೆ ?

ಲಿಂಡ್:—ನನಗೇನೋ ಅವಿವೇಕದಂತೆಯೇ ಕಾಣುತ್ತೆ. ಗಂಡನಿಗೆ ತಿಳಿಸದೆಯೇ—

ನೋರಾ:—ಅವನಿಗೆ ತಿಳಿಯದೇ ಗುಟ್ಟಾಗಿರಬೇಕಾದ್ದು ಅತ್ಯಾವಶ್ಯಕವಾಗಿತ್ತು. ಅಯ್ಯೋ! ನಿನಗಿನ್ನೂ ತಿಳಿಯಲಿಲ್ಲವೆ? ತನ್ನ ಖಾಯಿಲೆಯ ಅಪಾಯಸ್ಥಿತಿ ಅವನಿಗೆ ಗೊತ್ತಾಗಬಾರದಾಗಿತ್ತು. ವೈದ್ಯರು ಗುಟ್ಟಾಗಿ ನನಗೆ ಅವನ ಖಾಯಿಲೆಯ ಅಪಾಯಸ್ಥಿತಿಯನ್ನು ತಿಳಿಸಿ, ಕೂಡಲೇ ಇಟಲಿದೇಶಕ್ಕೆ ಕರೆದುಕೊಂಡು ಹೋಗಬೇಕೆಂದು ಹೇಳಿದರು. ನನಗೋಸ್ಕರವಾಗಿಯೇ ಇಟಲಿಗೆ ಹೋಗಬೇಕೆಂಬಂತೆ ತೋರಲು ಪ್ರಯತ್ನವನ್ನು ಮಾಡಲಿಲ್ಲವೆಂದು ತಿಳಿದಿದ್ದೀಯಾ ? ಇತರ ಕುಲಸ್ತ್ರೀಯರಂತೆ ನಾನೂ ದೇಶಸಂಚಾರ ಮಾಡಬೇಕೆಂದು ಕಣ್ಣೀರಿನೊಡನೆ ಪ್ರಾರ್ಥಿಸಿಕೊಂಡೆನು. ಆಗ ನಾನು ಗರ್ಭಿಣಿ. ಸಾಲವನ್ನಾದರೂ ಮಾಡಿ ನನ್ನ ಬಯಕೆಯನ್ನು ತೀರಿಸಿಕೊಡಬೇಕೆಂದು ಬೇಡಿಕೊಂಡೆನು. ಕ್ರಿಸ್ಟೀನ್, ಆ ಮಾತನ್ನು ಕೇಳಿ ನನ್ನ ಗಂಡನು ಕೋಪಿಸಿಕೊಂಡನು. ನನಗೆ ಬುದ್ಧಿಯಿಲ್ಲವೆಂದು ಹೇಳಿ ಹೆಂಗಸು ಚಪಲಚಿತ್ತಳಾಗಿದ್ದಾಗ್ಯೂ ಅವಳನ್ನು ತಿದ್ದುವುದು ಗಂಡನ ಕೆಲಸವೆಂದು ಹೇಳಿ ನನ್ನ ಬಾಯಿ ಮುಚ್ಚಿಸಿದನು. ಏನಾದರೂ ಆಗಲಿ ಅವನ ಪ್ರಾಣವನ್ನು ಉಳಿಸಬೇಕೆಂದು ಯೋಚಿಸಿ ಬೇರೊಂದು ಉಪಾಯವನ್ನು ಕಲ್ಪಿಸಬೇಕಾಗಿ ಬಂತು.

ಲಿಂಡ್:—ನಿಮ್ಮ ತಂದೆ ತಾನು ಹಣವನ್ನು ಕೊಡಲಿಲ್ಲವೆಂದು ನಿನ್ನ ಗಂಡನಿಗೆ ಹೇಳಲಿಲ್ಲವೆ ?

ನೋರಾ:—ಇಲ್ಲ, ಎಂದೂ ಇಲ್ಲ. ಆ ಸಮಯಕ್ಕೆ ಸರಿಯಾಗಿ ನನ್ನ ತಂದೆ ಸತ್ತುಹೋದನು. ನನ್ನ ತಂದೆಗೆ ಕಾಲಕ್ರಮೇಣ ಎಲ್ಲವನ್ನೂ ತಿಳಿಸಿ ನನ್ನ ಗಂಡನಿಗೆ ಗುಟ್ಟು ಗೊತ್ತಾಗಕೂಡ

ದೆಂದು ನನ್ನ ತಂದೆಯ ಒಪ್ಪಿಗೆಯನ್ನು ಪಡೆಯಬೇಕೆಂದಿದ್ದೆ. ಆಗ ಅವನಿಗೆ ಖಾಯಿಲೆ-ಅನಂತರ, ಅಯ್ಯೋ, ಅವನಿಗೆ ಹೇಳುವ ಸಂಭವವೇ ಇಲ್ಲವಾಯಿತು.

ಲಿಂಡ್:—ಆಗಿನಿಂದ ಈ ವರೆಗೂ ನಿನ್ನ ಗಂಡನಿಗೆ ಈ ವಿಷಯ ವನ್ನು ತಿಳಿಸೇ ಇಲ್ಲವೆ?

ನೋರಾ:—ಇಲ್ಲ, ಇದೇನು ನಿನ್ನ ಯೋಚನೆ? ಇಂಥಾ ವಿಷಯ ಗಳಲ್ಲಿ ನನ್ನ ಗಂಡನ ಅಭಿಪ್ರಾಯಗಳನ್ನು ತಿಳಿದೂ ತಿಳಿದೂ ಹೇಳಬಹುದೆ? ಅದೂ ಅಲ್ಲದೆ ಸ್ವತಂತ್ರಜೀವಿಯಾದ ಗಂಡ ನಿಗೆ ಇದು ತಿಳಿದರೆ ಅವನಿಗೆ ಅವಮಾನವೂ ದುಃಖವೂ ಆಗುವುದಿಲ್ಲವೆ? ನನ್ನ ಋಣಿಯೆಂದು ಅವನು ತಿಳಿದರೆ ನಮ್ಮಿಬ್ಬರ ಅನೋನ್ಯಭಾವಗಳಿಗೂ ಸಂಬಂಧಗಳಿಗೂ ಕುಂದಕ ಉಂಟಾಗಿ ನಮ್ಮ ಚೆಲುವಾದ ಸಂತೋಷಯುಕ್ತವಾದ ಸಂಸಾ ರವೇ ಬೇರೆಯಾಗಿ ಹೋಗಿಬಿಡುತ್ತೆ.

ಲಿಂಡ್:—ಹಾಗಾದರೆ ಅವನಿಗೆ ಎಂದಿಗೂ ಹೇಳುವುದೇ ಇಲ್ಲವೆ?

ನೋರಾ:—(ಯೋಚನೆ ಮಾಡುತ್ತಾ ಅರ್ಧನಗುವಿನೊಡನೆ) ಹೇಳ ಬಹುದು. ಎಂದೋ ಒಂದು ದಿನ, ವಯಸ್ಸಾದ ಮೇಲೆ- ನನ್ನ ರೂಪ ಲಾವಣ್ಯಗಳು ಮುಗಿದ ಮೇಲೆ. ನನ್ನ ಮಾತನ್ನು ಕೇಳಿ ನಗಬೇಡ. ನನ್ನ ಅರ್ಥವೇನೆಂದರೆ ತೊರ್ವಾಲ್ಡನು ನನ್ನಮೇಲಿಟ್ಟಿರುವ ಪ್ರೀತಿ ಸ್ವಲ್ಪ ಆರಿದ ಮೇಲೆ; ನನ್ನ ಬಟ್ಟೆಬರೆ, ಶೃಂಗಾರ, ನಾಟ್ಯ ಗೀತ, ಇವು ಗಳ ಮೇಲಿನ ಉತ್ಸಾಹವು ಸ್ವಲ್ಪ ಕಡಿಮೆಯಾದನಂತರ; ಆ ಕಾಲಕ್ಕೆ ಏನಾದರೂ ಬಂಡವಾಳವಿರಬೇಕಲ್ಲವೆ? (ತಡೆದು ಮಾತನ್ನು ನಿಲ್ಲಿಸಿ) ಏನು ಹುಚ್ಚು! ಆ ಕಾಲ ಎಂದಿಗೂ ಬರುವುದಿಲ್ಲ. ಈಗ ಹೇಳು, ನನ್ನ ಗುಟ್ಟು ನಿನಗೆ ಹೇಗೆ ತೋರುತ್ತೆ! ನಾನು ನಿರುಪಯೋಗಿಯೆಂದು ಈಗಲೂ ಹೇಳುತ್ತೀಯಾ? ನಿಜವಾಗಿ ಹೇಳುತ್ತೇನೆ ಕೇಳು. ಈ ವಿಷ ಯವು ಆಗಲೇ ಬಹಳ ಕಿರುಕುಳ ಹುಟ್ಟಿಸಿದೆ. ಹಣವನ್ನು

ಒದಗಿಸುವುದು ಸುಲಭ ಸಾಧ್ಯವಲ್ಲ. ಅದೇನೋ ಮೂರು ತಿಂಗಳಿಗೊಂದಾವರ್ತಿ ಕೊಡುವ ಬಡ್ಡಿಯಂತೆ—ಅದೇನೋ ಕಂತುಗಳಂತೆ-ಇವುಗಳನ್ನೆಲ್ಲಾ ಸರಿಪಡಿಸಿಕೊಂಡಿರುವುದು, ದಿನೆ, ದಿನೆ, ಕಷ್ಟವಾಗುತ್ತಿದೆ. ಏನೋ ಇಲ್ಲಿ ಸ್ವಲ್ಪ ಅಲ್ಲಿ ಸ್ವಲ್ಪ ಖರ್ಚು ಕಡಿಮೆಮಾಡಿ ಕೂಡಿಡಬಹುದು. ಮನೆಯ ಖರ್ಚಿಗೆ ಕೊಟ್ಟ ಹಣದಲ್ಲಿ ಏನೂ ಕೂಡಿಡುವುದಕ್ಕಾಗುವುದಿಲ್ಲ. ಯಾಕಂದರೆ ನನ್ನ ಗಂಡನಿಗೆ ಊಟ-ಉಪಚಾರಗಳು ಚೆನ್ನಾಗಿ ನಡೆಯುತ್ತಿರಬೇಕು. ಮಕ್ಕಳಿಗೆ ಬಟ್ಟೆ-ಬರೆಗಳನ್ನು ಸರಿಯಾಗಿ ಹಾಕದೆ ಹರಕು ಬರಕು ಮತ್ತು ಚಿಂದಿ ಬಟ್ಟೆಗಳಲ್ಲಿ ಬಿಡಲಾಗುವುದಿಲ್ಲ. ಆ ಮುದ್ದು ಮಕ್ಕಳಿಗೆ ಅವರ ತಂದೆ ಕೊಟ್ಟಿದ್ದನ್ನೆಲ್ಲಾ, ನಿರ್ವಂಚನೆಯಾಗಿ ಉಪಯೋಗಿಸುತ್ತೇನೆ.

ಲಿಂಡ್:—ಹಾಗಾದರೆ, ನಿನ್ನ ಸ್ವಂತ ಖರ್ಚಿನ ಹಣದಿಂದ ಈ ಕಂತು ಮುಂತಾದುವನ್ನು ನಿರ್ವಹಿಸುತ್ತಿದ್ದೀಯಾ, ಅಮ್ಮ, ನೋರಾ ?

ನೋರಾ:—ಹಾಗೆ ತಾನೆ ಮತ್ತೆ. ಅಲ್ಲದೆ, ಅದಕ್ಕೆ ನಾನು ತಾನೆ ಹೊಣೆ. ತೊರ್ವಾಲ್ಡ್ ನನಗೆ ಹೊಸ ಉಡುಪಿಗಾಗಲಿ ಮತ್ತೆ ಯಾವುದಕ್ಕಾಗಲಿ ಹಣವನ್ನು ಕೊಟ್ಟರೆ ಅದರಲ್ಲಿ ಅರ್ಧವನ್ನು ಮಿಗಿಸಿಕೊಂಡು ಸುಲಭಕ್ರಯದ ಬಟ್ಟೆಬರೆಯನ್ನು ತೆಗೆದುಡುತ್ತೇನೆ. ದೈವಾನುಗ್ರಹದಿಂದ ನನಗೆ ಯಾವ ಉಡುಪಾದರೂ ಚೆನ್ನಾಗಿ ಒಪ್ಪುತ್ತಾದ್ದರಿಂದ ಯಾವುದೂ ತೊರ್ವಾಲ್ಡನಿಗೆ ಅನುಮಾನಾಸ್ಪದವಾಗಿಲ್ಲ ಕ್ರಿಸ್ಟೀ! ಆದಾಗ್ಗೂ ಸದಾ ಹೀಗೆ ಮಾಡುವುದು ಬಹಳ ಕಷ್ಟ. ಒಳ್ಳೆ ಬಟ್ಟೆ ಬರೆಗಳನ್ನು ಹಾಕಿಕೊಂಡು ಶೃಂಗಾರಮಾಡಿಕೊಳ್ಳಬೇಕೆಂದು ನನಗೂ ಆಶೆ-ಇಲ್ಲವೆ ?

ಲಿಂಡ್:—ಹೌದಮ್ಮ! ಹೌದು.

ನೊರಾ:—ಬೇರೆ ಸ್ವಲ್ಪ ದ್ರವ್ಯಾರ್ಜನೆ ಮಾಡುವ ವಿಧಾನವೊಂದನ್ನು ಕಂಡು ಹಿಡಿದಿದ್ದೇನೆ. ಹೋದವರ್ಷ ಚಳಿಗಾಲದಲ್ಲಿ ಮನೆ ಯಲ್ಲಿ ಗುಟ್ಟಾಗಿ ಬರವಣಿಗೆ ಕೆಲಸಮಾಡಿ ಸ್ವಲ್ಪ ದುಡ್ಡು ಸಂಪಾದಿಸಿದೆ. 'ಚಿತ್ತುನಕಲಿ' ನಿಂದ ಶುದ್ಧ ಪ್ರತಿಯನ್ನು ಬರೆಯುವುದು! ಚಿಕ್ಕಮನೆಯ ಅಗಣಿಯನ್ನು ಹಾಕಿಕೊಂಡು ರಾತ್ರಿಯೆಲ್ಲಾ ಕೆಲಸ ಮಾಡುತ್ತಿದ್ದೆ. ಆಗ ದಣಿದು ದಣಿದು ಸಾಕಾಗುತ್ತಿತ್ತು. ನಾನು ಒಬ್ಬ ಗಂಡಸಿನಂತೆ ಎಂದು ತಿಳಿದು ಕೊಳ್ಳುತ್ತಿದ್ದೆ.

ಲಿಂಡ್:—ಹೀಗೆಲ್ಲಾ ಮಾಡಿ ಇದುವರೆಗೆ ಎಷ್ಟು ಸಾಲ ತೀರಿಸಿದ್ದೀಯೆ?

ನೋರಾ:—ಎಷ್ಟೋ; ಚೆನ್ನಾಗಿ ಗೊತ್ತಿಲ್ಲ. ಇಂಥಾ ವ್ಯವಹಾರ ಗಳ ಲೆಕ್ಕಪಕ್ಕಗಳನ್ನು ಇಡುವುದು ಕಷ್ಟ. ನಾನು ಕೂಡಿ ಹಾಕಿದ ಹಣವನ್ನೆಲ್ಲಾ ಒಂದು ಕಾಸೂ ಬಿಡದೆ ಸಾಲಕ್ಕೆ ತೆತ್ತಿದ್ದೇನೆಂದು ಮಾತ್ರ ಗೊತ್ತು. ಕೆಲವು ಸಂದರ್ಭಗಳಲ್ಲಿ ಬಹಳ ಕಷ್ಟವಾಗುತ್ತಿತ್ತು. ಆಗ್ಗೆ ಇಲ್ಲಿ ಕೂತುಕೊಂಡು ಒಬ್ಬ ವೃದ್ಧ ಲಕ್ಷಾಧೀಶ್ವರನು ನನ್ನಲ್ಲಿ ಅನುರಕ್ತನಾಗಿರಬಹು ದೆಂದು ಮನಸ್ಸಿನಲ್ಲಿ ಯೋಚನೆ ಮಾಡುತ್ತಾ—

ಲಿಂಡ್:—ಏನು! ಅದು ಯಾವನು?

ನೋರಾ:—ಬಾಯಿಮುಚ್ಚಮ್ಮ—ಆ ಮೇಲೆ ಆ ಮುದುಕನು ಸತ್ತು ಹೋದನೆಂತಲೂ; ಅವನ ಉಯಿಲನ್ನು ಅನಂತರ ಓದಿ ನೋಡಿದರೆ, ಅದರಲ್ಲಿ ದೊಡ್ಡ ಅಕ್ಷರಗಳಲ್ಲಿ, "ನನ್ನ ಆಸ್ತಿ ಸರ್ವಸ್ವವನ್ನೂ ರೂಪವತಿಯಾದ ನೋರಾ ಹೆಲ್ಮರಿಗೆ ಬಿಟ್ಟಿ ದ್ದೇನೆ. ಮತ್ತು ಆಸ್ತಿಯ ಬೆಲೆಯನ್ನು ಅವಳಿಗೆ ಕೈಹಣವಾಗಿ ಸಲ್ಲಿಸತಕ್ಕದ್ದು" ಎಂಬುದಾಗಿ ಬರೆದಿಟ್ಟಿದ್ದನೆಂತಲೂ ಮನಸ್ಸಿ ನಲ್ಲಿ ಮಂಡಿಗೆಮಾಡಿ ತಿನ್ನುತ್ತಿದ್ದೆ.

ಲಿಂಡ್:—ಪ್ರಿಯೆ, ನೋರಾ! ಅವನು ಯಾರಿರಬಹುದಮ್ಮ?

ನೋರಾ:—ಅಯ್ಯೋ ದೇವರೆ! ಅರ್ಥವಾಗಲಿಲ್ಲವೆ? ಯಾವ ವೃದ್ಧನೂ ಅಲ್ಲ! ನನಗೆ ಹಣ ಒದಗದೆ ಹೋದಾಗ,

ಇನ್ನೇನೂ ಉಪಾಯಗಳು ತೋರದೆ ಇದ್ದಾಗ, ಕೂತು ಕೊಂಡು ಮನಸ್ಸಿಗೆ ಬಂದಹಾಗೆಲ್ಲಾ ಯೋಚನೆಮಾಡುತ್ತಿದ್ದೆ. ಈಗೇನು ಎಲ್ಲವೂ ಒಂದೆ; ನನ್ನ ಮಟ್ಟಿಗೆ ಆ ಮುದಿಕೋತಿ ಎಲ್ಲಿ ಬೇಕಾದರೂ ಇರಬಹುದು. ಅವನೂ ಬೇಡ. ಅವನ ಉಯಿಲೂ ಬೇಡ. ಈಗ ನನಗೆ ನಿರಾತಂಕವಾಗಿದೆ (ಎದ್ದು ನಿಂತುಕೊಂಡು) ನಿರಾತಂಕವಾಗಿದ್ದೇನೆಂದು, ಕ್ರಿಸ್ಟೀನ್, ಮನಸ್ಸಿನಲ್ಲಿ ಕೂಡ ಎಷ್ಟು ರುಚಿಯಾಗಿರುತ್ತೆ! ನಿರಾತಂಕವಾಗಿ !! ಯಾವ ಅತಂಕವೂ ಇಲ್ಲದಿರುವುದು. ಇನ್ನು ಮೇಲೆ ಮಕ್ಕಳೊಡನೆ ಕುಣಿಯುತ್ತಾ ಆಟವಾಡಬಹುದು ! ತೊರ್ವಾಲ್ಡನಿಗೆ ಒಪ್ಪುವಂತೆ ಸಂಸಾರವನ್ನು ನೋಡಿಕೊಂಡು ಮನೆಯನ್ನು ಶೃಂಗರಿಸಿ ಇಟ್ಟುಕೊಂಡಿರಬಹುದು ! ಅಲ್ಲದೆ ಚಳಿಗಾಲ ಹೋಗಿ ಶೀಘ್ರದಲ್ಲಿಯೇ ವಸಂತಕಾಲ ಬರುವುದು. ಅಪರಿಮಿತವಾದ ನೀಲಾಂಬರ! ಎಷ್ಟುಸೊಗಸು! ಒಂದೆರಡು ಊರು ಸುತ್ತಿಕೊಂಡು ಬರಲೂಬಹುದು. ಇನ್ನೊಮ್ಮೆ ಸಮುದ್ರವನ್ನೂ ನೋಡಬಹುದು ! ಸಂತುಷ್ಟವಾದ ಜೀವನಕ್ಕಿಂತಲೂ ಇನ್ನೇನಿದೆ ಈ ಪ್ರಪಂಚದಲ್ಲಿ !!! (ಗಂಟೆಯ ಶಬ್ದವು ಹಜಾರದ ಕಡೆಯಿಂದ ಕೇಳಿಬರುವುದು.)

ಲಿಂಡ್:—ಗಂಟೆಯ ಶಬ್ದ ಕೇಳಿದ ಹಾಗೆ ಆಯಿತು ; ನಾನು ಹೊರಡುತ್ತೇನೆ.

ನೋರಾ:—ಬೇಡ, ಹೋಗಬೇಡ, ಇರು-ಇಲ್ಲಿಯಾರೂ ಬರುವುದಿಲ್ಲ. ತೊರ್ವಾಲ್ಡನಿಗಾಗಿ ಇರಬಹುದು.

ಆಳು:—(ಬಾಗಿಲಲ್ಲಿ ನಿಂತು) ಕ್ಷಮಿಸಬೇಕು ! ಯಾರೋ ದೊಡ್ಡ ಮನುಷ್ಯರು ಯಜಮಾನರನ್ನು ನೋಡಬೇಕಂತೆ ! ಡಾಕ್ಟರ್ ಯಜಮಾನರ ಸಂಗಡವಿದ್ದಾರೆ—

ನೋರಾ:—ಯಾರು ಅದು ?

ಕ್ರಾಗ್‌ಸ್ಟಾಡ್:—(ಬಾಗಿಲಲ್ಲಿ) ನಾನಮ್ಮ—ಮಿಸೆಸ್‌ಹೆಲ್ಮರ್ (ಮಿಸೆಸ್ ಲಿಂಡ್ ಚಕಿತಳಾಗಿ-ಸ್ವಲ್ಪನಡುಗಿ-ಕಿಟಕಿಯ ಕಡೆಗೆ ಸರಿಯುವಳು.)

ನೋರಾ:—(ಅವನ ಕಡೆ ಒಂದೆರಡು ಹೆಜ್ಜೆಯನ್ನಿಟ್ಟು ಪ್ರಯಾಸದಿಂದ ಮೆಲ್ಲಗೆ ಮಾತನಾಡುತ್ತಾ) ನೀನು ? ಏನುಬೇಕು ? ನನ್ನ ಗಂಡ ನೊಡನೆ ಏನು ಮಾತನ್ನಾಡಬೇಕು ?

ಕ್ರಾಗ್‌ಸ್ಟಾಡ್:—ಬ್ಯಾಂಕಿನ ವಿಷಯ—ಹಾಗೆಂದೇ ಹೇಳಬೇಕು. ನನಗೆ ಬ್ಯಾಂಕಿನಲ್ಲಿ ಸಣ್ಣ ನೌಕರಿಯಿದೆ. ನಿಮ್ಮ ಯಜಮಾನರಿಗೆ ಈಗ ಅಲ್ಲಿ ಮುಖ್ಯಾಧಿಕಾರಿಯ ಕೆಲಸವಾಗಿದೆಯೆಂದು ತಿಳಿಯಿತು.—

ನೋರಾ: —ಹಾಗಾದರೆ—?

ಕ್ರಾಗ್‌ಸ್ಟಾಡ್:—ಇನ್ನೇನೂ ಇಲ್ಲ, ಶುಷ್ಕವ್ಯವಹಾರದ ವಿಷಯವೇ ಹೊರತು, ಮತ್ತೇನೂ ಇಲ್ಲ. ಮಿಸೆಸ್ ಹೆಲ್ಮರ್ ! ಖಂಡಿತವಾಗಿಯೂ ಮತ್ತೇನೂ ಇಲ್ಲ.

ನೋರಾ:—ಹಾಗಾದರೆ ದಯವಿಟ್ಟು ಈ ಕಡೆ ಹೋಗಬೇಕು. (ಸ್ವಲ್ಪ ಉದಾಸೀನದಿಂದ ತಲೆಬಾಗಿ ದಾರಿಯನ್ನು ತೋರಿಸಿ ಅನಂತರ ಚಿಕ್ಕ ಮನೆಯ ಬಾಗಿಲನ್ನು ಹಾಕಿಕೊಳ್ಳುವಳು.)

ಲಿಂಡ್:—ನೋರಾ ? ಯಾರು ಆ ಮನುಷ್ಯ ?

ನೋರಾ:—ಒಬ್ಬ ಲಾಯರು, ಕ್ರಾಗ್‌ಸ್ಟಾಡ್ ಎಂದು ಅವನ ಹೆಸರು.

ಲಿಂಡ್:—ಹಾಗಾದರೆ ಅವನೇ ಸರಿ ?

ನೋರಾ:—ನಿನಗೆ ಅವನು ಗೊತ್ತೇ ?

ಲಿಂಡ್:—ಹಿಂದೆ ಯಾವಾಗಲೋ ಸ್ವಲ್ಪ ಪರಿಚಯವಿತ್ತು. ಬಹಳ ವರ್ಷಗಳ ಹಿಂದೆ. ನಮ್ಮೂರಿನಲ್ಲಿ ಯಾವಾಗಲೋ ಒಂದು ಸಾರಿ ಗುಮಾಸ್ತನಾಗಿದ್ದನು.

ನೋರಾ:—ಹೌದು, ಗುಮಾಸ್ತನಾಗಿದ್ದ.

ಲಿಂಡ್:—ಬಹಳ ಬದಲಾಯಿಸಿದ್ದಾನೆ.

ನೋರಾ:—ಅವನಿಗೆ ಸಂಸಾರ ಸೌಖ್ಯವಿರಲಿಲ್ಲ.

ಲಿಂಡ್:—ಈಗ ಅವನು ವಿಧುರನಲ್ಲವೆ ?

ನೋರಾ:—ಮಕ್ಕಳೊಂದಿಗನೂ ಕೂಡ! ಒಲೆ ಉರಿ ಹೆಚ್ಚಾಗಿದೆ. (ಒಲೆಯ ಬಾಗಿಲನ್ನು ಮುಚ್ಚಿ ಹತ್ತಿರವಿದ್ದ ತೂಗಾಡುವ ಕುರ್ಚಿಯನ್ನು ಬೇರೊಂದುಕಡೆ ಇಡುವಳು.)

ಲಿಂಡ್:—ಅವನು ನಾನಾತರಹದ ವ್ಯವಹಾರಗಳನ್ನು ನಡೆಸುತ್ತಾನೆಂದು ಜನರು ಆಡಿಕೊಳ್ಳುತ್ತಾರೆ.

ನೋರಾ:—ಹಾಗೆಯೆ? ಇರಬಹುದು! ನನಗೊಂದೂ ಗೊತ್ತಿಲ್ಲ. ವ್ಯಾಪಾರ ಮತ್ತು ವ್ಯವಹಾರಗಳ ಮಾತು ನಮಗೇಕೆ? ಬರೀ ಮನಃಕ್ಲೇಶ!

ಡಾಕ್ಟರ್‌ರ್ಯಾಂಕ್:—(ಹೆಲ್ಮರನ ಚಿಕ್ಕಮನೆಯಿಂದ ಬಂದು-ಬಾಗಿಲನ್ನು ಮುಚ್ಚುವುದಕ್ಕೆ ಮುಂಚಿತವಾಗಿ ಹೆಲ್ಮರನನ್ನು ಕುರಿತು ಕೂಗುತ್ತಾ) ಇಲ್ಲವಪ್ಪ—ಇಲ್ಲ, ನಿನ್ನನ್ನು ಅಡಚಣೆ ಮಾಡುವುದಿಲ್ಲ. ಇಲ್ಲಿಗಿಂತಲೂ ನಿನ್ನ ಹೆಂಡತಿಯೊಡನೆ ನಾಲ್ಕಾರು ಮಾತುಗಳನ್ನಾಡಿಕೊಂಡು ಹೋಗುತ್ತೇನೆ. (ಬಾಗಿಲನ್ನು ಮುಚ್ಚುವನು. ಮಿಸೆಸ್ ಲಿಂಡನ್ನು ನೋಡುವನು) ಕ್ಷಮಿಸಬೇಕು. ನನಗೆ ಗೊತ್ತಿರಲಿಲ್ಲ. ನಿನ್ನನ್ನೂ ತೊಂದರೆಪಡಿಸುತ್ತೇನೆಂದು ಕಾಣುತ್ತೆ.

ನೋರಾ:—ಇಲ್ಲ. ಖಂಡಿತವಾಗಿಯೂ ಇಲ್ಲ. (ಇಬ್ಬರಿಗೂ ಗುರುತು ಹೇಳುತ್ತಾ) ಡಾಕ್ಟರ್ ರ್ಯಾಂಕ್-ಮಿಸೆಸ್ ಲಿಂಡ್.

ಡಾ|| ರ್ಯಾಂಕ್:—ಮಿಸೆಸ್ ಲಿಂಡ್‌ಳ ಹೆಸರು ಈ ಮನೆಯಲ್ಲಿ ಎಷ್ಟೋ ಆವರ್ತಿ ಕೇಳಿದ್ದೇನೆ. ಮೆಟ್ಟಲುಗಳಮೇಲೆ ನಿನ್ನನ್ನು ದಾಟಿ ಬರಲಿಲ್ಲವೆ?

ಲಿಂಡ್:—ಹೌದು, ನಾನು ನಿಧಾನವಾಗಿ ಮೆಟ್ಟಲು ಹತ್ತುವವಳು.

ರ್ಯಾಂಕ್:—ದೇಹದಲ್ಲೆಲ್ಲೋ ನಿರ್ಬಲವಾಗಿರಬಹುದು.

ಲಿಂಡ್:—ಅದೇನೂ ಇಲ್ಲ. ಈಚೆಗೆ ನಾನು ಶಕ್ತಿಮೀರಿ ಕೆಲಸ ಮಾಡುತ್ತಿದ್ದೆ.

ರ್ಯಾಂಕ್:—ಅಷ್ಟೇ ತಾನೆ? ಇನ್ನೇನೂ ಇಲ್ಲವಲ್ಲ? ಹಾಗಾದರೆ ಪಟ್ಟಣಕ್ಕೆ ಬಂದಿರುವುದು ತಮಾಷೆ ನೋಡಿಕೊಂಡು ಮನೋಲ್ಲಾಸ ಪಡುವುದಕ್ಕಿರಬಹುದು?

ಲಿಂಡ್:—ಏನಾದರೂ ಕೆಲಸ ಸಿಕ್ಕೀತೆಂದು ಬಂದಿದ್ದೇನೆ.

ರ್‍ಯಾಂಕ್:—ದಣಿದ ದೇಹಕ್ಕೆ ಅದು ಒಳ್ಳೆಯ ಆರೈಕೆಯೆ?

ಲಿಂಡ್:—ಏನು ಮಾಡುವುದು, ಡಾಕ್ಟರ್ ರ್‍ಯಾಂಕ್? ಹೇಗಾದರೂ ಬದುಕಬೇಕಲ್ಲ?

ರ್‍ಯಾಂಕ್:—ಹಾಗೆ ಹೇಳುವುದು ಒಂದು ವಾಡಿಕೆಯಾಗಿದೆ.

ನೋರಾ:—ಡಾಕ್ಟರ್ ರ್‍ಯಾಂಕ್, ಬದುಕಿರಬೇಕೆಂಬ ಆಶೆ ನಿನಗೂ ಕೂಡ ಇದ್ದೇಇದೆ.

ರ್‍ಯಾಂಕ್:—ಯಥಾರ್ಥವೇ ಸರಿ. ಬಾಳು ಎಷ್ಟೇ ಯಾತನೆಯಾಗಲಿ, ಕೈಲಾದ ಮಟ್ಟಿಗೂ ಹತ್ತಿಕೊಂಡಿರಬೇಕೆಂದು ನನಗೂ ಆಶೆ ಇದೆ. ನನ್ನಲ್ಲಿ ಬರುವ ರೋಗಿಗಳಿಗೂ ಅದೇ ಆಶೆ. ಧರ್ಮ ವಿಷಯದಲ್ಲಿ ರೋಗಿಗಳಾದವರಿಗೂ ಅದೇ ಆಸೆ. ಅಂಥವನೊಬ್ಬ–ಸುಲಭವಾಗಿ ಗುಣವಾಗದ ರೋಗಿ–ಈ ನಿಮಿಷದಲ್ಲಿ ಹೆಲ್ಮರ್ ಸಂಗಡ—

ಲಿಂಡ್:—(ಖಿನ್ನವಾಗಿ) ಆಹಾ!

ನೋರಾ:—ಯಾರು ನೀನು ಹೇಳುವುದು?

ರ್‍ಯಾಂಕ್:—ಯಾವನೋ ಒಬ್ಬ ಲಾಯರ್. ಅವನ ಹೆಸರು ಕ್ರಾಗ್‌ಸ್ಟಾಡ್ ಎಂದು. ನಿಮಗೆ ಅವನು ಗೊತ್ತಿಲ್ಲ. ನೀತಿಗೆ ವಿರುದ್ಧವಾಗಿ ನಡೆಯುವ ರೋಗದಿಂದ ನರಳುತ್ತಿದ್ದಾನೆ. ಮಿಸೆಸ್ ಹೆಲ್ಮರ್, ಬದುಕಬೇಕಾದ್ದು ಬಹಳ ಮುಖ್ಯವೆಂದು ಅವನೂ ಹೇಳತೊಡಗಿದ್ದಾನೆ.

ನೋರಾ:—ಹಾಗೆಯೇ? ತೊರ್ವಾಲ್ಡಿನ ಸಂಗಡ ಅವನೇನು ಮಾತಾಡಬೇಕೆಂದಿದ್ದಾನೆ?

ರ್‍ಯಾಂಕ್:—ನನಗೆ ಗೊತ್ತಿಲ್ಲ, ಏನೋ ಬ್ಯಾಂಕಿನ ವಿಷಯ ಅಂತ ಕೇಳಿದೆ.

ನೋರಾ:—ಅವನ ಹೆಸರೇನು?—ಈ—ಕ್ರಾಗ್‌ಸ್ಟಾಡ್ ಬ್ಯಾಂಕಿಗೆ ಸಂಬಂಧಪಟ್ಟವನೆಂದು ನನಗೆ ತಿಳಿದಿರಲಿಲ್ಲ.

ರ್ಯಾಂಕ್:—ಹೌದು, ಬ್ಯಾಂಕಿನಲ್ಲಿ ಅವನಿಗೇನೋ ಕೆಲಸವಿರುವಂತೆ ಕಾಣುತ್ತೆ. (ಮಿಸೆಸ್ ಲಿಂಡ್ ಕಡೆ ತಿರುಗಿ) ನಿಮ್ಮ ಕಡೆ ಹೇಗೋ ಹೇಳಲಾರೆ. ಕೆಲವು ಮನುಷ್ಯರು ಅತ್ಯಂತ ಉತ್ಸಾಹದಿಂದ ಮೂಸಿನೋಡಿ ಹೋಗುತ್ತಾ, ನೀತಿಪತಿತನೂ ಧರ್ಮಚ್ಯುತನೂ ಆದ ಮನುಷ್ಯನನ್ನು ಕಂಡಕೂಡಲೇ ಅವನನ್ನು ಸಂಪಾದನೆಯ ಅಧಿಕಾರದಲ್ಲಿಟ್ಟು ಅವನಮೇಲೆ ಅಹನ್ಯಹನಿ ಕಾವಲಿರುತ್ತಾರೆ. ಆರೋಗ್ಯಶೀಲರನ್ನು ಕಣ್ಣೆತ್ತಿಕೂಡ ನೋಡುವುದಿಲ್ಲ.

ಲಿಂಡ್:—ಯಾವ ಪ್ರಕಾರವೇ ಆಗಲಿ! ವ್ಯಾಧಿಗ್ರಸ್ತನಿಗೆ ತಾನೇ ಔಷಧವನ್ನು ಕೊಡಬೇಕು? ದೇಹವ್ಯಾಧಿಯಾದರೇನು? ಮನೋವ್ಯಾಧಿಯಾದರೇನು? ಧರ್ಮವ್ಯಾಧಿಯಾದರೇನು?

ರ್ಯಾಂಕ್:—(ಭುಜವನ್ನು ಹಾರಿಸಿ) ನೋಡಿದೆಯಾ! ಇಂತಹ ಹುಚ್ಚು ಕನಿಕರದಿಂದಲೇ ಸಮಾಜ ರೋಗದ ತಿಪ್ಪೆಯಾಗಿರುವುದು. (ತನ್ನ ಸ್ವಂತ ಯೋಚನೆಯಲ್ಲಿ ಆಸಕ್ತಳಾಗಿರುವ ನೋರಾ ಹೆಲ್ಮರ್ ನಕ್ಕು ಚಪ್ಪಾಳೆ ಹೊಡೆಯುವಳು)

ರ್ಯಾಂಕ್:—ನಗುವುದು ಯಾಕೆ? ಸಮಾಜದ ಅನುಭವವೇನಾದರೂ ನಿನಗುಂಟೆ?

ನೋರಾ:—ಸಮಾಜದಿಂದ ನನಗೇನಾಗಬೇಕು? ನಾನು ನಗುವುದಕ್ಕೆ ಕಾರಣ ಬೇರೆ. ಯಾವುದೋ ಒಂದು ವಿನೋದ ವಿಷಯ ಜ್ಞಾಪಕಕ್ಕೆ ಬಂತು. ಡಾಕ್ಟರ್ ರ್ಯಾಂಕ್-ಬ್ಯಾಂಕಿನಲ್ಲಿರುವವರೆಲ್ಲರೂ ನನ್ನ ಗಂಡನ ಕೈಕೆಳಗಿರುವರೆ?

ರ್ಯಾಂಕ್:—ನಿನ್ನ ವಿನೋದಕ್ಕೆ ಆ ವಿಷಯವೇ ಕಾರಣ?

ನೋರಾ:—(ಹುಸಿನಗೆ ನಗುತ್ತಾ ಯಾವುದೋ ಒಂದು ಮಟ್ಟನ್ನು ಕುರುಗುಟ್ಟುತ್ತಾ) ಅದು ನನ್ನ ಗೋಜು. (ಚಿಕ್ಕಮನೆಯಲ್ಲಿ ಶತಪಥ ಸುತ್ತುತ್ತಾ) ನಮ್ಮಗಳಿಗೆ—ಅಂದರೆ, ತೊರ್ವಾಲ್ಡನಿಗೆ—ಅಷ್ಟು ಜನಗಳ ಮೇಲೆ ಅಧಿಕಾರವಿದೆಯೆಂದು ಯೋಚಿಸಿದರೂ ಹಿಗ್ಗ

ಬೇಕಾಗುವುದು. (ತನ್ನ ಜೇಬಿನಿಂದ ಪೊಟ್ಟಣವನ್ನು ತೆಗೆದು)

ಡಾಕ್ಟರ್—ಒಂದು ಚೂರು ಮಿಠಾಯಿ! ಏನನ್ನುತ್ತೀಯೆ?

ರ್ಯಾಂಕ್:—ಮಿಠಾಯಿ!! ಈ ಮನೆಯಲ್ಲಿ ಮಿಠಾಯಿ ಸುಳಿಯ ಕೂಡದೆಂದಿದ್ದೆ.

ನೋರಾ:—ಹೌದು, ಆದರೆ ಈ ಮಿಠಾಯನ್ನು ಕ್ರಿಸ್ಟೀನ್ ಕೊಟ್ಟಳು.

ಲಿಂಡ್:—ಏನು? ನಾನೆ?

ನೋರಾ:—ಬೆದರಬೇಡ. ತೊರ್ವಾಲ್ಡನು ನಾನು ಅವುಗಳನ್ನು ತಿನ್ನ ಕೂಡದೆಂದು ಹೇಳಿರುವುದು ನಿನಗೆ ಹೇಗೆ ಗೊತ್ತಾಗಬೇಕು. ನನ್ನ ಹಲ್ಲಿಗೆ ಒಳ್ಳೆಯದಲ್ಲವೆಂದು ಅವನು ತಿಳಿದುಕೊಂಡಿದ್ದಾನೆ. ಆದಾಗ್ಯೂ-ಏನೋ-ಒಂದು ಸಾರಿ ತೆಗೆದುಕೊಂಡರೆ ಏನು ಪ್ರಮಾದ? ನಾನು ಹೇಳುವುದು ನಿಜವಲ್ಲವೆ? ಡಾಕ್ಟರ್ ರ್ಯಾಂಕ್ ಎಲ್ಲಿ-ಆ-ಅನ್ನು (ಒಂದು ಚೂರು ಮಿಠಾಯನ್ನು ಅವನ ಬಾಯಿಗೆ ಹಾಕುವಳು) ಕ್ರಿಸ್ಟೀನ್, ನೀನೂ ಒಂದು ಚೂರು ತೆಗೆದುಕೊಳ್ಳಬೇಕು. ನಾನೂ ಒಂದು ಚೂರು, ಒಂದೇ-ಒಂದು-ಚೂರು-ಅಥವಾ-ಎರಡು-ತೆಗೆದುಕೊಳ್ಳುತ್ತೇನೆ. (ಶತಪಥ ಸುತ್ತುತ್ತಾ) ನನಗೆ ಪರಮ ಸಂತೋಷ. ಈಗ ಒಂದು ಕೆಲಸವನ್ನು ಮಾಡಬೇಕೆಂದು ತುಂಬಾ ಆಸೆಯಿದೆ.

ರ್ಯಾಂಕ್:—ಏನದು?

ನೋರಾ:—ಹೇಳಬೇಕೆಂದೇನೋ ಆಸೆ ಇದೆ. ತೋರ್ವಾಲ್ಡಿನ ಕಿವಿಗೂ ಅದು ಬೀಳುವ ಹಾಗಿದ್ದರೆ—!

ರ್ಯಾಂಕ್:—ಯಾಕೆ ಮತ್ತೆ ಹೇಳಬಾರದು?

ನೋರಾ:—ಹೇಳಲೆ! ಅಯ್ಯೋ, ಆಗುವುದಿಲ್ಲ. ಗರ್ಹ್ಯವಾದ ವಿಷಯ!

ಲಿಂಡ್:—ಗರ್ಹ್ಯ?

ರ್ಯಾಂಕ್:—ಹಾಗಾದರೆ ನನ್ನನ್ನು ಕೇಳಿದರೆ ಅಂಥಾ ವಿಷಯಗಳನ್ನು ಹೇಳಬಾರದೆಂದೇ ತೋರುತ್ತೆ. ಆದಾಗ್ಯೂ ನಮ್ಮಿಬ್ಬರ

ಮುಂದೆ ಮಾತ್ರ ಹೇಳಬಹುದು. ತೊರ್ವಾಲ್ಡನೆ ಕಿವಿಗೆ ಬೀಳಬಹುದಾದರೆ, ನೀನು ಹೇಳಬೇಕೆಂದಿರುವುದೇನು?

ನೋರಾ:—ಹೇಳಲಾಸೆಯೇನಿದೆ, ಎಂದರೆ—"ಅಯ್ಯೋ ನನ್ನ ಈ ಕೆಟ್ಟ ಜನ್ಮ!"

ರ್ಯಾಂಕ್:—ನಿನಗೆ ಹುಚ್ಚೇನಾದರೂ ಹಿಡಿದಿದೆಯೆ?

ಲಿಂಡ್:—ನೋರಾ!—ಪ್ರಿಯಸಖಿ—!

ರ್ಯಾಂಕ್:—ಹೇಳು-ಅವನಿಲ್ಲಿದ್ದಾನೆ!

ನೋರಾ:—(ಪೊಟ್ಟಣವನ್ನು ಬಚ್ಚಿಟ್ಟು) ಸುಮ್ಮನಿರು! ಸುಮ್ಮನಿರು! ಬಾಯಿಮುಚ್ಚು! (ಹೆಲ್ಮರನು ಚಿಕ್ಕಮನೆಯಿಂದ ಹೊರಗೆ ಬರುವನು. ಭುಜದ ಮೇಲೆ ಶಾಖಾವರಣದ ಅಂಗಿಯೂ ಕೈಯಲ್ಲಿ ಟೋಪಿಯೂ ಇರುವುದು.)

ನೋರಾ:—ತೊರ್ವಾಲ್ಡ್, ಅವನನ್ನು ಸಾಗಹಾಕಿದೆಯಾ?

ಹೆಲ್ಮರ್:—ಇದೇತಾನೆ ಹೊರಟುಹೋದ.

ನೋರಾ:—ನಿಮ್ಮಿಬ್ಬರಿಗೂ ಗುರುತು ಮಾಡಿಸಿ ಕೊಡಬೇಕು— ಇಗೋ ಕ್ರಿಸ್ಟೀನ-ಇವಳು. ಊರಿಗೆ ಈಗತಾನೆ ಬಂದಿದ್ದಾಳೆ.

ಹೆಲ್ಮರ್:—ಕ್ರಿಸ್ಟೀನ? ಕ್ಷಮಿಸು-ಆದರೆ ನನಗೆ ಜ್ಞಾಪಕವಿಲ್ಲ—

ನೋರಾ:—ಮಿಸೆಸ್ ಲಿಂಡ್-ಕ್ರಿಸ್ಟೀನ ಲಿಂಡ್, ಗೊತ್ತಾಗಲಿಲ್ಲವೆ,— ಪ್ರಿಯ!

ಹೆಲ್ಮರ್:—ಓಹೋ ಸರಿ, ನನ್ನ ಹೆಂಡತಿಯ ಪಾಠಶಾಲೆ ಗೆಳತಿ ಅಲ್ಲವೆ?

ಲಿಂಡ್:—ಹೌದು,-ಆಗಿನಿಂದಲೂ ನಾವಿಬ್ಬರೂ ಗೆಳತಿಯರು.

ನೋರಾ:—ಏನು ಗೊತ್ತೆ? ನಿನ್ನನ್ನು ಕಾಣುವುದಕ್ಕೆ ಅಷ್ಟು ದೂರದಿಂದ ಬಂದಿದ್ದಾಳೆ!

ಹೆಲ್ಮರ್:—ಹಾಗೆಂದರೆ?

ಲಿಂಡ್:— ಇಲ್ಲ! ನಿಜವಾಗಿಯೂ - ಅಂದರೆ - ನಾನು—!

ನೋರಾ:—ಕ್ರಿಸ್ಟೀ ಇದ್ದಾಳಲ್ಲ-ಲೆಕ್ಕಪಕ್ಕಗಳನ್ನಿಡುವುದರಲ್ಲಿ ಬಹಳ ಸಮರ್ಥಳು. ಯಾವನಾದರೂ ಒಬ್ಬ ನಿಪುಣನ ಕೈಕೆಳಗಿದ್ದು ಕೊಂಡು ಆದರಲ್ಲಿ ಸಂಪೂರ್ಣ ಪಾಂಡಿತ್ಯವನ್ನು ಪಡೆಯಬೇಕೆಂದು ಅವಳಿಗೆ ಆಸೆ ಬಲವಾಗಿದೆ.

ಹೆಲ್ಮರ್:—ವಿವೇಕದ ಮಾರ್ಗ, ಮಿಸೆಸ್ ಲಿಂಡ್!

ನೋರಾ:—ನಿನಗೆ ಬ್ಯಾಂಕಿನಲ್ಲಿ ಮುಖ್ಯಾಧಿಕಾರಿಯ ಕೆಲಸವಾಯಿತೆಂದು ತಿಳಿದೊಡನೆ, ಈ ವೃತ್ತಾಂತವು ತಂತಿಯ ಮೂಲಕ ಎಲ್ಲೆಲ್ಲಿಯೂ ಹರಡಿತು-ಸಾವಕಾಶ ಮಾಡದೆ ಇಲ್ಲಿಗೆ ಬಂದಳು. ನನಗೋಸ್ಕರವಾಗಿ ಕ್ರಿಸ್ಟೀಗೆ ಏನಾದರೂ ಸಹಾಯಮಾಡುತ್ತೀಯಲ್ಲವೆ?

ಹೆಲ್ಮರ್:—ಅದೇನೂ ಅಷ್ಟು ಅಸಾಧ್ಯವಾಗಿ ಕಾಣುವುದಿಲ್ಲ; ನೀನು ವಿಧವೆ ಎಂದು ಎಣಿಸುತ್ತೇನೆ, ಮಿಸೆಸ್ ಲಿಂಡ್?

ಲಿಂಡ್:—ಹೌದು.

ಹೆಲ್ಮರ್:—ಲೆಕ್ಕವಿಡುವ ವಿಷಯದಲ್ಲಿ ಅನುಭವವುಂಟು?

ಲಿಂಡ್:—ತಕ್ಕಮಟ್ಟಿಗೆ.

ಹೆಲ್ಮರ್:—ಹಾಗಾದರೆ ನಿನಗೇನಾದರೂ ಕೆಲಸ ಮಾಡಿಕೊಟ್ಟೇನು?

ನೋರಾ:—(ಸಂತೋಷದಿಂದ ಚಪ್ಪಾಳೆಯನ್ನು ಹಾಕಿ) ನಾನೇನು ಹೇಳಿದೆ! ನಾನೇನು ಹೇಳಿದೆ?

ಹೆಲ್ಮರ್:—ನಿನ್ನ ಪುಣ್ಯ ಮಿಸೆಸ್ ಲಿಂಡ್. ಒಳ್ಳೆಯ ಸಮಯದಲ್ಲೇ ಬಂದಿದ್ದೀಯೆ!

ಲಿಂಡ್:—ನನ್ನ ಕೃತಜ್ಞತೆಯನ್ನು ಹೇಗೆ ತೋರಿಸಲಿ?—

ಹೆಲ್ಮರ್:—ಏನೂ ಅವಶ್ಯಕವಿಲ್ಲ (ಮೇಲಂಗಿಯನ್ನು ತೊಟ್ಟು) ಕ್ಷಮಿಸು, ಈ ದಿನ ವಿರಾಮವಿಲ್ಲ.—

ರ್‍ಯಾಂಕ್:—ಸ್ವಲ್ಪತಾಳು-ನಾನೂ ಬರುತ್ತೇನೆ. (ಹಜಾರದಿಂದ ತನ್ನ ಮೇಲಂಗಿಯನ್ನು ತಂದು ಒಲೆಯಮುಂದೆ ಬೆಚ್ಚಗೆ ಮಾಡುತ್ತಿರುವನು.)

ನೋರಾ :—ಬಹಳ ಹೊತ್ತು ಮಾಡಬೇಡ-ತೊರ್ವಾಲ್ಡ್.

ಹೆಲ್ಮರ್ :—ಒಂದು ಗಂಟೆ-ಅಷ್ಟೆ.

ನೋರಾ :—ನೀನೂ ಹೊರಡುತ್ತೀಯಾ, ಕ್ರಿಸ್ಟೀನ್ ?

ಲಿಂಡ್ :—(ಅಂಗಿಯನ್ನು ಧರಿಸುತ್ತಾ) ಹೋಗಬೇಕು ; ಇರುವುದಕ್ಕೆ ಒಂದು ಕೊಠಡಿಯನ್ನು ಹುಡುಕಬೇಕಾಗಿದೆ.

ಹೆಲ್ಮರ್ :—ಹಾಗಾದರೆ ನಾವಿಬ್ಬರೂ ಸ್ವಲ್ಪದೂರ ಜೊತೆಯಲ್ಲಿ ಹೋಗಬಹುದು.

ನೋರಾ :—(ಅಂಗಿಯನ್ನು ಸರಿಪಡಿಸುತ್ತ) ನಮ್ಮ ಮನೆಯ ಸ್ಥಳ ಸಂಕೋಚದ ವಿಷಯದಲ್ಲಿ ನನಗೆ ನಾಚಿಕೆಯಾಗುತ್ತೆ. ಬಹಳ ಇಕ್ಕಟ್ಟಾದ ಈ ಸ್ಥಳದಲ್ಲಿ—

ಲಿಂಡ್ :—ಆ ಯೋಚನೆಯೇ ಮಾಡಬೇಡ, ದಯವಿಟ್ಟು. ನಾನು ಹೋಗಿಬರುತ್ತೇನೆ. ನೋರಾ, ಕೃತಜ್ಞತೆಗಳು.

ನೋರಾ :—ಸದ್ಯಕ್ಕೆ ಹೋಗಿ ಬಾ. ಸಾಯಂಕಾಲ ಪುನಃ ಬರಬೇಕು. ಡಾಕ್ಟರ್ ರ್‍ಯಾಂಕ್, ನೀನೂ ಕೂಡ! ಏನು ಹೇಳುತ್ತಿ ? ಸ್ವಸ್ಥವಾಗಿದ್ದರೆ? ಸ್ವಸ್ಥವಿಲ್ಲದೇ ಏನು? ಬೆಚ್ಚಗೆ ಬಟ್ಟೆಯನ್ನು ಹಾಕಿಕೋ, (ಅವರೆಲ್ಲರೂ ಮಾತನಾಡುತ್ತಾ ಬಾಗಿಲಿನಿಂದ ಹೊರಗೆ ಹೊರಡುವರು; ಅದೇ ಸಮಯದಲ್ಲಿ ಮೆಟ್ಟಲು ಕಡೆಯಿಂದ ಮಕ್ಕಳ ಮಾತುಗಳು ಕೇಳಿಬರುವುವು.)

ನೋರಾ :—ಬಂದರು, ಬಂದರು. (ಬಾಗಿಲು ತೆಗೆಯಲು ಓಡುವಳು; ದಾದಿಯು ಮಕ್ಕಳೊಡನೆ ಒಳಗೆ ಬರುವಳು.) ಬನ್ನಿ! ಬನ್ನಿ !! (ಎಲ್ಲರನ್ನೂ ಮುದ್ದಿಡುವಳು) ನನ್ನ ಚಿನ್ನಗಳಿರಾ ! ಕ್ರಿಸ್ಟೀನ್, ನೋಡು, ಮುದ್ದಾಗಿಲ್ಲವೆ ನನ್ನ ಕಂದಗಳು?

ರ್‍ಯಾಂಕ್ :—ಚಳಿಗಾಳಿಯಲ್ಲಿ ಏಕೆ ನಿಂತಿರುವುದು !

ಹೆಲ್ಮರ್ :—ಮಿಸೆಸ್ ಲಿಂಡ್ ! ಹೋಗೋಣ ಬಾ, ಹೆತ್ತ ತಾಯಿಯಲ್ಲದೆ ಇನ್ನಾರಿರಬಲ್ಲರು ಈ ರಾಜ್ಯದಲ್ಲಿ ? (ರ್‍ಯಾಂಕ್, ಹೆಲ್ಮರ್-

ಲಿಂಡ್, ಎಲ್ಲರೂ ಮೆಟ್ಟಲಿಳಿದು ಹೋಗುವರು. ದಾದಿಯು ಮಕ್ಕಳೊಡನೆ ಮುಂದೆ ಬರುವಳು. ನೋರಾ ಬಾಗಿಲು ಹಾಕುವಳು.)

ನೋರಾ :—(ಮಕ್ಕಳೊಂದಿಗೆ ಆಟವಾಡುತ್ತಾ) ಅಬ್ಬಬ್ಬ! ಒಂದು ದೊಡ್ಡ ನಾಯಿ ಅಟ್ಟಿಸಿಕೊಂಡು ಬಂತೆ? ನಿನ್ನನ್ನು ಕಚ್ಚಲಿಲ್ಲ ತಾನೆ? ಇಲ್ಲ-ಇಲ್ಲ. ನಾಯಿಗಳು ಚಿಕ್ಕಪುಟ್ಟ ಮುದ್ದು ಮಕ್ಕಳನ್ನು ಕಚ್ಚುವುದಿಲ್ಲ. ಐವಾರ್, ನೀನು ಪೊಟ್ಟಣಗಳನ್ನು ಬಿಚ್ಚಿ ನೋಡಕೂಡದು....ಅವುಗಳು ಏನು? ಏನೆಂದು ತಿಳಿದುಕೊಳ್ಳಬೇಕೆಂದು ಆಸೆಯಲ್ಲವೆ?....ಬೇಡ,—ಬೇಡ, ಬಿಚ್ಚಬೇಡ-ಏನೋ ಕೆಟ್ಟ ಪದಾರ್ಥಗಳು!....ಬಾ, ಬಾ ಇಲ್ಲಿ-ಆಡೋಣಬಾ, ಏನು ಆಡೋಣ? ಕಣ್ಣಾ ಮುಚ್ಚಾಲೆ, ಹೌದು ಕಣ್ಣಾ ಮುಚ್ಚಾಲೆಯಾಡೋಣ-ಬಾಬ್ ಮೊದಲು ಅವಿತುಕೊಳ್ಳುತ್ತಾನೆ...ನಾನು ಅವಿತುಕೊಳ್ಳಬೇಕೋ? ಹಾಗೇ ಆಗಲಿ.

(ಅವಳು ಮತ್ತು ಮಕ್ಕಳು ಸಂತೋಷದಿಂದ ಕಿರಿಚಿ ಕೂಗುತ್ತಿದ್ದಾರೆ. ಎಲ್ಲೆಲ್ಲೂ ಓಡಾಡುತ್ತಿದ್ದಾರೆ. ಕೊನೆಗೆ ನೋರಾ ಮೇಜಿನ ಕೆಳಗೆ ಅವಿತುಕೊಳ್ಳುತ್ತಾಳೆ. ಮಕ್ಕಳು ಅವಳನ್ನು ಹುಡುಕಿಕೊಂಡು ಎಲ್ಲೆಲ್ಲೂ ಓಡಾಡುತ್ತಾರೆ. ಅವಳು ಸಿಕ್ಕುವುದಿಲ್ಲ. ಅವಳ ನಗುವನ್ನು ಕೇಳಿ ಕಡೆಗೆ ಮೇಜಿನಕೆಳಗೆ ನೋಡುತ್ತಾರೆ. ಕಡೆಗೆ ಗಟ್ಟಿಯಾಗಿ ಎಲ್ಲರೂ ನಗುತ್ತಾರೆ. ಈ ಸಮಯದಲ್ಲಿ ಯಾರೋ ಹೊರಗಿನಿಂದ ಬಂದು ಬಾಗಿಲು ತಟ್ಟುತ್ತಾರೆ. ಆದರೆ ಯಾರಿಗೂ ಕೇಳಿಸುವುದಿಲ್ಲ. ಅರೆಬಾಗಿಲು ತೆಗೆದುಕೊಂಡು ಕ್ರಾಗ್‌ಸ್ಟಾಡ್ ಒಳಗೆ ಇಣಿಕಿ ನೋಡುತ್ತಾನೆ. ಸ್ವಲ್ಪ ನೋಡುತ್ತಾ, ನಿಂತಿರುತ್ತಾನೆ; ತಾಯಿ ಮಕ್ಕಳ ಆಟ ನಡೆಯುತ್ತಿರುತ್ತೆ.)

ಕ್ರಾಗ್‌ಸ್ಟಾಡ್ :—ಕ್ಷಮಿಸಬೇಕು—ಮಿಸೆಸ್ ಹೆಲ್ಮರ್!

ನೋರಾ :—ಓ! (ಎಂದು ಉಸಿರು ಹಿಡಿದು ಕಿರಿಚಿಕೊಂಡು ಎದ್ದುನಿಂತುಕೊಂಡು) ಓ! ನಿನಗೇನು ಬೇಕು?

ಕ್ರಾಗ್‌ಸ್ಟಾಡ್ :-ಬೀದಿಯ ಬಾಗಿಲು ತೆಗೆದಿತ್ತು. ಯಾರೋ ಬಾಗಿಲು ಹಾಕುವುದನ್ನು ಮರೆತುಬಿಟ್ಟಿರಬೇಕು.

ನೋರಾ :—(ಎದ್ದು ನಿಂತು) ಯಜಮಾನರು ಮನೆಯಲ್ಲಿಲ್ಲ.

ಕ್ರಾಗ್‌ಸ್ಟಾಡ್ :—ಅದು ನನಗೆ ಗೊತ್ತು.

ನೋರಾ :—ಹಾಗಾದರೆ ಏನುಬೇಕು ನಿನಗೆ?

ಕ್ರಾಗ್‌ಸ್ಟಾಡ್ :—ನಿನ್ನಲ್ಲಿ ಒಂದು ಮಾತು ಮಾತನಾಡಬೇಕಾಗಿತ್ತು.

ನೋರಾ :—ನನ್ನೊಡನೆ? (ಮಕ್ಕಳನ್ನು ಕುರಿತು-ಮೆಲ್ಲನೆ-ಮೃದು ದನಿಯಿಂದ) ಒಳಗೆ ಹೋಗಿ, ದಾದಿಯ ಹತ್ತಿರಕ್ಕೆ, ಏನು? ಯೋಚಿಸಬೇಡಿ. ಗುಮ್ಮಯ್ಯನು ಅಮ್ಮನಿಗೆ ಏನೂ ತೊಂದರೆ ಮಾಡುವುದಿಲ್ಲ. ಅವನು ಹೋದಮೇಲೆ ಪುನಃ ನಾವೆಲ್ಲರೂ ಆಟವಾಡೋಣ. (ಮಕ್ಕಳನ್ನು ಎಡಗಡೆ ಚಿಕ್ಕಮನೆಯಲ್ಲಿ ಬಿಟ್ಟು ಬಾಗಿಲು ಹಾಕಿಕೊಳ್ಳುವಳು) ನನ್ನ ಸಂಗಡ ಮಾತನಾಡಬೇಕೆ?

ಕ್ರಾಗ್‌ಸ್ಟಾಡ್ :—ಹೌದು.

ನೋರಾ :—ಈಗ-ಈ ಹೊತ್ತು? ಇನ್ನೂ ತಿಂಗಳಾಗಲಿಲ್ಲವಲ್ಲ!

ಕ್ರಾಗ್‌ಸ್ಟಾಡ್ :—ಇಲ್ಲಿ, ಈ ಹೊತ್ತು ಹಬ್ಬದ ಮುಂದಿನ ಸಂಜೆ, ಹ್ಯಾಗೆ ಹಬ್ಬವನ್ನು ಕಳೆಯುತ್ತೀಯೊ ಅದು ನಿನ್ನ ಕೈಯಲ್ಲಿದೆ!

ನೋರಾ:—ನಿನ್ನ ಅರ್ಥವೇನು? ಈ ಹೊತ್ತು ನಿಜವಾಗಿಯೂ ನನ್ನ ಕೈಯಲ್ಲಿ—

ಕ್ರಾಗ್‌ಸ್ಟಾಡ್ :—ಅದನ್ನು ಆಮೇಲೆ ಮಾತನಾಡಬಹುದು. ಈ ವಿಷಯ ಬೇರೆ. ಒಂದು ಗಳಿಗೆ ವಿರಾಮವು ಉಂಟು ತಾನೆ?

ನೋರಾ :—ಆಗಬಹುದು-ಆದರೂ-!

ಕ್ರಾಗ್‌ಸ್ಟಾಡ್ :—ಸರಿ, ಹಾಗಾದರೆ-ನಾನು ಫಲಾಹಾರದ ಅಂಗಡಿಯಲ್ಲಿ ಕುಳಿತಿರುವಾಗ ನಿನ್ನ ಗಂಡನು ಹೊರಗೆ ಹೋದದ್ದನ್ನು ನೋಡಿದೆ.

ನೋರಾ :—ಇರಬಹುದು-ಆಮೇಲೆ?

ಕ್ರಾಗ್‌ಸ್ಟಾಡ್ :—ಒಬ್ಬ ವನಿತೆಯೊಡನೆ.

ನೋರಾ :—ಆಮೇಲೆ?

ಕ್ರಾಗ್‌ಸ್ಟಾಡ್ :—ನಾನು ಕೇಳಬಹುದಾದರೆ ಆ ವನಿತೆಯು ಮಿಸೆಸ್ ಲಿಂಡ್ ಅಲ್ಲವೆ ?

ನೋರಾ :—ಹೌದು.

ಕ್ರಾಗ್‌ಸ್ಟಾಡ್ :—ಊರಿಗೆ ಈಗತಾನೆ ಬಂದಿರುವ ಹಾಗೆ ಕಾಣುತ್ತೆ.

ನೋರಾ :—ಹೌದು, ಈ ವೊತ್ತು ಬಂದಳು.

ಕ್ರಾಗ್‌ಸ್ಟಾಡ್ :—ಅವಳು ನಿನ್ನ ಗೆಳತಿಯಲ್ಲವೆ ?

ನೋರಾ :—ಹೌದು, ಆದರೆ ಅದಕ್ಕೂ ನಿನಗೂ - - - - ಸಂಬಂಧ ಗೊತ್ತಾಗಲಿಲ್ಲ !

ಕ್ರಾಗ್‌ಸ್ಟಾಡ್ :—ಅವಳಿಗೂ ನನಗೂ ಪೂರ್ವದ ಪರಿಚಯವುಂಟು.

ನೋರಾ :—ಅದು ನನಗೆ ಗೊತ್ತು.

ಕ್ರಾಗ್‌ಸ್ಟಾಡ್ :—ಹಾಗೆಯೆ ? ಹಾಗಾದರೆ ನಿನಗೆ ಎಲ್ಲವೂ ಗೊತ್ತಿರ ಬೇಕು. ಇರಬಹುದೆಂತಲೂ ಊಹೆಯಿತ್ತು. ಹಾಗಾದರೆ ನಿರ್ದಾಕ್ಷಿಣ್ಯವಾಗಿ-ಮರೆಮಾಚದೆ ಕೇಳುತ್ತೇನೆ-ಬ್ಯಾಂಕಿನಲ್ಲಿ ಅವಳಿಗೆ ಕೆಲಸವೇನಾದರೂ ಸಿಕ್ಕುವ ಸಂಭವವುಂಟೋ ?

ನೋರಾ :—ಕ್ರಾಗ್‌ಸ್ಟಾಡ್, ಹೀಗೆ ಪ್ರಶ್ನೆಮಾಡಲು ನಿನಗೇನು ಅಧಿಕಾರ ? ನಿನಗೆ ಯಾರು ಸ್ವಾತಂತ್ರ್ಯವನ್ನು ಕೊಟ್ಟರು ? ನೀನು ನನ್ನ ಗಂಡನ ಕೈಕೆಳಗಿನ ಚಾಕರ! ಆದರೂ ನಿನ್ನ ಪ್ರಶ್ನೆಗೆ ಉತ್ತರವು ದೊರಕುವುದು. ಹೌದು, ಮಿಸೆಸ್ ಲಿಂಡ್‌ಗೆ ಬ್ಯಾಂಕಿನಲ್ಲಿ ಕೆಲಸವಾಗುವುದು. ಅವಳಿಗಾಗಿ ನಾನು ಹೊಡೆದಾಡಿದೆ ; ತಿಳಿಯಿತೋ ಕ್ರಾಗ್‌ಸ್ಟಾಡ್ ?—

ಕ್ರಾಗ್‌ಸ್ಟಾಡ್ :—ಹಾಗಾದರೆ ನನ್ನ ಊಹೆಯೆಲ್ಲಾ ನಿಜವಾಯಿತು.

ನೋರಾ :—(ಶತಪಥವನ್ನು ಸುತ್ತುತ್ತಾ) ಎಲ್ಲರಿಗೂ ಯಾವುದೋ ಸ್ವಲ್ಪ ದಾಕ್ಷಿಣ್ಯ ಇದ್ದೇ ಇರುತ್ತೆ. ಹೆಂಗಸಾದ ಮಾತ್ರಕ್ಕೆ ಅದೊಂದೂ ಇಲ್ಲವೆಂಬ ಭಾವನೆಯೆ ? ಕ್ರಾಗ್‌ಸ್ಟಾಡ್ ! ಇನ್ನೊಬ್ಬರ ಕೈಕೆಳಗೆ ಕೆಲಸ ಮಾಡುವವರು ಮರ್ಯಾದೆ ಮೀರಬಾರದು. ಅಲ್ಲದೆ ನೋಡು-ಅಧಿಕಾರಿಗಳ ಹತ್ತಿರ ಮಾತು ನಡೆಯುವವರನ್ನು- -ಅಸಮಾಧಾನ - - -

ಕ್ರಾಗ್‌ಸ್ಟಾಡ್:—ಮಾತು ನಡೆಯುವವರನ್ನು?

ನೊರಾ:—ಅಷ್ಟೆ! ನೋಡು.

ಕ್ರಾಗ್‌ಸ್ಟಾಡ್:—(ದನಿಯನ್ನು ಬದಲಾಯಿಸಿ) ದಯವಿಟ್ಟು ನಿನ್ನ ದಾಕ್ಷಿಣ್ಯವನ್ನು ನನಗೋಸ್ಕರವಾಗಿ ಉಪಯೋಗಿಸಬೇಕು.

ನೋರಾ:—ಏನು ? ನಿನ್ನರ್ಥ!

ಕ್ರಾಗ್‌ಸ್ಟಾಡ್:—ಒಬ್ಬರ ಗೋಜಿಲ್ಲದೆ ಬ್ಯಾಂಕಿನಲ್ಲಿ ನನ್ನ ಸಣ್ಣ ನೌಕರಿಯಲ್ಲಿ ನಾನು ಎಂದಿನಂತೆ ಇರುವಂತೆ ನೀನು ನೋಡಿಕೊಳ್ಳಬೇಕು.

ನೋರಾ:—ಇದು ಏನು ನಿನ್ನ ಮಾತು? ಕೆಲಸದಿಂದ ನಿನ್ನನ್ನು ತೆಗೆದುಹಾಕುತ್ತಾರೆಂದು ಯಾರು ಹೇಳಿದರು ?

ಕ್ರಾಗ್‌ಸ್ಟಾಡ್:—ಸುಮ್ಮನೆ ನಟಿಸಿ ಪ್ರಯೋಜನವೇನು ? ನಿನ್ನ ಸ್ನೇಹಿತಳು ನನ್ನ ಜೊತೆಯಲ್ಲಿ ಕೆಲಸಮಾಡಲೊಪ್ಪುತ್ತಾಳೆಂದು ನಾನು ನಂಬಲಾರೆ. ನನ್ನ ಸ್ಥಾನ ಭ್ರಂಶಕ್ಕೆ ಯಾವ ಪುಣ್ಯಾತ್ಮನು ಕಾರಣನೋ ಅದೂ ನನಗೆ ಗೊತ್ತು.

ನೋರಾ:—ನಾನು ನಿಜವಾಗಿಯೂ ಹೇಳುತ್ತೇನೆ, ಕೇಳು—!

ಕ್ರಾಗ್‌ಸ್ಟಾಡ್:—ಇರಬಹುದು. ಪ್ರಕೃತ ಮಾತನಾಡೋಣ. ನೀನು ನನ್ನ ಪರವಾಗಿ ಹೊಡೆದಾಡಬೇಕಾದ ಕಾಲವು ಒದಗಿದೆಯೆಂದು ನಿನಗೆ ಎಚ್ಚರ ಕೊಡಬೇಕಾಗಿದೆ.

ನೋರಾ:—ಮಿಸ್ಟರ್ ಕ್ರಾಗ್‌ಸ್ಟಾಡ್, ನನ್ನ ಮಾತೇನೂ ನಡೆಯುವುದಿಲ್ಲ.

ಕ್ರಾಗ್‌ಸ್ಟಾಡ್:—ಇಲ್ಲವೆ ? ಇದೇತಾನೆ ಹೇಳುತ್ತಿದ್ದೆ—?

ನೋರಾ:—ನನ್ನ ಮಾತುಗಳಿಗೆಲ್ಲಾ ಬೇರೊಂದು ಅರ್ಥಮಾಡಬೇಡ! ನಾನು! ನಾನೇ ? ಈ ವಿಷಯಗಳಲ್ಲೆಲ್ಲಾ ನನ್ನ ಗಂಡನು ನನ್ನ ಮಾತುಗಳಿಗೆ ಕಿವಿಗೊಡುತ್ತಾನೆಂದು ನೀನು ಹೇಗೆ ನಂಬುತ್ತೀಯೆ ?

ಕ್ರಾಗ್‌ಸ್ಟಾಡ್:—ನಮ್ಮ ಬಾಲ್ಯದಿಂದ ನಿನ್ನ ಗಂಡ ನನಗೆ ಗೊತ್ತು. ಎಲ್ಲಾ ಗಂಡಂದಿರಹಾಗೇ ಅವನೂ ಹೆಂಡತಿಯ ಮಾತಿಗೆ ಮೃದುವಾಗತಕ್ಕವನೇ!

ನೋರಾ:—ನನ್ನ ಗಂಡನ ವಿಷಯದಲ್ಲಿ ಅಪಮಾನಕರವಾಗಿ ಮಾತನ್ನಾಡಿದರೆ, ನಿನ್ನನ್ನು ಮನೆ ಬಿಟ್ಟು ಓಡಿಸುತ್ತೇನೆ.

ಕ್ರಾಗ್‌ಸ್ಟಾಡ್:—ಮಿಸೆಸ್ ಹೆಲ್ಮರ್! ನೀನು ಬಹಳ ಧೈರ್ಯಶಾಲಿ.

ನೋರಾ:—ನಿನ್ನನ್ನು ಕಂಡರೆ ಏನೂ ಹೆದರಿಕೆ ಇಲ್ಲ. ಹೊಸವರ್ಷವಾದ ಕೆಲವು ದಿನಗಳೊಳಗೇ ಎಲ್ಲಾ ಬಿಡಿಸಿಕೊಳ್ಳುವ ಹಾಗೆ ಮಾಡುತ್ತೇನೆ.

ಕ್ರಾಗ್‌ಸ್ಟಾಡ್:—(ಸೈರಿಸಿಕೊಂಡು) ಮಿಸೆಸ್ ಹೆಲ್ಮರ್, ನನ್ನ ಮಾತುಗಳನ್ನು ಕೇಳು. ನನ್ನ ಪ್ರಾಣಕ್ಕಿಂತಲೂ ಹೆಚ್ಚೆಂಬ ಭಾವನೆಯಿಂದ ನನ್ನ ಸಣ್ಣ ನೌಕರಿಯನ್ನು ಕಳೆದುಕೊಳ್ಳದೇ ಇರುವುದಕ್ಕಾಗಿ ಕಾದಾಡಲು ಸಿದ್ಧನಾಗಿದ್ದೇನೆ.

ನೋರಾ:—ನೋಡಿದರೆ ಹಾಗೆಯೇ ಕಾಣುತ್ತೆ.

ಕ್ರಾಗ್‌ಸ್ಟಾಡ್:—ಹಣದಾಸೆಗೋಸ್ಕರವೇ ಅಲ್ಲ; ಈ ವಿಷಯದಲ್ಲಿ ಹಣ ನನಗೆ ತೃಣದಂತೆ! ಬೇರೆ ಕಾರಣವೊಂದುಂಟು; ಅದನ್ನು, ಏನಾದರೂ ಆಗಲಿ ನಿನಗೆ ತಿಳಿಸಿಬಿಡುತ್ತೇನೆ. ನನ್ನ ಸ್ಥಿತಿ ಇದು—ನಿನಗೂ ಗೊತ್ತಿರಬಹುದು. ಅನೇಕರಿಗೆ ಇದು ಗೊತ್ತುಂಟು. ಬಹಳ ವರ್ಷಗಳ ಹಿಂದೆ ಏನೋ ಮಾಡಬಾರದ ಕೆಲಸವೊಂದನ್ನು ಮಾಡಿದ್ದೆ.

ನೋರಾ:—ಅಂಥಾ ವಿಷಯವೇನೋ ನನ್ನ ಕಿವಿಗೆ ಬಿದ್ದಂತೆ ಜ್ಞಾಪಕವಿದೆ.

ಕ್ರಾಗ್‌ಸ್ಟಾಡ್:—ಕೋರ್ಟಿನ ತನಕ ದೂರೇನೂ ಹತ್ತಲಿಲ್ಲ. ಆದರೂ ನನ್ನ ಜೀವನಮಾರ್ಗದಲ್ಲಿ ಎಲ್ಲೆಲ್ಲೂ ಅಡಚಣೆಯಾಯಿತು. ಆದ್ದರಿಂದ ಗುಟ್ಟಾಗಿ ಲೇವಾದೇವಿ ಕೆಲಸವನ್ನು ಪ್ರಾರಂಭಿಸಿದೆ. ಅದು ನಿನಗೆ ಗೊತ್ತು. ಸುಮ್ಮನೆ ಹೇಗೆ ಕೂತಿರುವುದು?

ಏನಾದರೂ ಮಾಡುತ್ತಿರಬೇಕಲ್ಲವೆ? ಸತ್ಯವಾಗಿಯೂ ಈ ಕೆಲಸದಲ್ಲೂ ಅಷ್ಟು ಕೀಳುತನದಿಂದ ಪ್ರವರ್ತಿಸಿಲ್ಲ. ಈಗ ಅವೆಲ್ಲವನ್ನೂ ಬಿಡಬೇಕಾಗಿದೆ. ನನ್ನ ಗಂಡುಮಕ್ಕಳು ಪ್ರವರ್ಧಮಾನರಾಗುತ್ತಿದ್ದಾರೆ. ಅವರಿಗೋಸ್ಕರ ಹೋದ ಮರ್ಯಾದೆಯನ್ನೆಲ್ಲಾ ಎಷ್ಟಾದರೆ ಅಷ್ಟನ್ನು ಸಂಪಾದಿಸ ಬೇಕಾಗಿದೆ. ಬ್ಯಾಂಕಿನಲ್ಲಿರುವ ಕೆಲಸ ಈ ಸಂದರ್ಭದಲ್ಲಿ ಏಣಿಯ ಮೊದಲು ಮೆಟ್ಟಲಿನಂತೆ. ಹಾಗಿರುವಾಗ್ಗೆ ನಿನ್ನ ಗಂಡನು ನನ್ನನ್ನು ಕೆಳಗೆ ಒದ್ದು ಕೆಸರಿನಲ್ಲಿ ತುಳಿಯಬೇ ಕೆಂದಿದ್ದಾನೆ.

ನೋರಾ :--ನನ್ನ ಮಾತನ್ನು ನೀನು ದಯವಿಟ್ಟು ನಂಬಬೇಕು, ಕ್ರಾಗ್‌ಸ್ಟಾಡ್! ಈ ವಿಷಯದಲ್ಲಿ ನನ್ನ ಕೈಲೇನೂ ಆಗುವುದಿಲ್ಲ.

ಕ್ರಾಗ್‌ಸ್ಟಾಡ್ :—ಯಾಕೆಂದರೆ ನನಗೆ ಸಹಾಯ ಮಾಡಬೇಕೆಂದು ನಿನಗೆ ಮನಸ್ಸಿಲ್ಲ. ಆದರೂ ನಿನ್ನನ್ನು ನಿರ್ಬಂಧ ಪಡಿಸಲು ನನಗೆ ಶಕ್ತಿಯುಂಟು.

ನೋರಾ :—ಏನು! ನೀನು ನನಗೆ ಸಾಲ ಕೊಟ್ಟದ್ದೀಯೆಂದು ನನ್ನ ಗಂಡನಿಗೆ ಹೇಳುತ್ತೀಯಾ?

ಕ್ರಾಗ್‌ಸ್ಟಾಡ್ :—ಹುಂ- ಮಸಲಾ ಹೇಳಿದೆನೆನ್ನೋಣ? ಆ ಮೇಲೆ-

ನೋರಾ :—ಎಂಥಾ ನೀಚ-ನೀನು? (ಅಳುತ್ತಾ)— ಆಂತರ್ಯದಲ್ಲಿ ಯಾವ ಕಾರ್ಯದಿಂದ ಸ್ವಲ್ಪ ಸಂತೋಷ ಪಡುತ್ತಿದ್ದೆನೋ— ಅದನ್ನು ನಿರ್ದಾಕ್ಷಣ್ಯವಾಗಿ ಅಸಡ್ಡಾಳತನದಿಂದ ನನ್ನ ಗಂಡ ನಿಗೆ ಹೇಳಿ - ನೀನು ಹೇಳಿ - ನನ್ನನ್ನು ಸಹಿಸಲಾರದ ಸ್ಥಿತಿಗೆ ಒಡ್ಡುತ್ತೀಯಾ ?

ಕ್ರಾಗ್‌ಸ್ಟಾಡ್ :— ಸಹಿಸಲಾರದ — ಅಷ್ಟೇ ? — ಎಂದು.

ನೋರಾ :—(ಜೋರಿನಿಂದ) - ಆಗಲಿ - ಮಾಡು ಹಾಗಾದರೆ, ನೋಡೋಣ. ಅದರಿಂದ ನಿನಗೇ ಕೇಡಕಾಗುತ್ತೆ. ನೀನೆಂತಹ ನೀಚನೆಂದು ನನ್ನ ಗಂಡನಿಗೆ ತಿಳಿಯುತ್ತೆ; ನಿನ್ನ ಕೆಲಸ ವೇನೋ ಆಗ್ಗೆ ನಿನಗೆ ಉಳಿಯುವುದಿಲ್ಲ!

ಕ್ರಾಗ್‌ಸ್ಟಾಡ್ :—ನಾನು ಕೇಳಿದ್ದೇನೆಂದರೆ - ಮನೆಯಲ್ಲಿ ಮಾತ್ರ ಸಹಿಸಲಾರದ ಸ್ಥಿತಿಯೆ ?—ಎಂದು.

ನೋರಾ :—ನನ್ನ ಗಂಡನಿಗೆ ತಿಳಿದೊಡನೆ ನಿನ್ನ ಸಾಲವನ್ನು ಮೊದಲು ತೀರಿಸಿಬಿಡುತ್ತಾನೆ. ಆಮೇಲೆ ನಿನಗೂ ನನಗೂ ಏನೂ ಸಂಬಂಧವಿರುವುದಿಲ್ಲ.

ಕ್ರಾಗ್‌ಸ್ಟಾಡ್ :—(ಸ್ವಲ್ಪ ಹತ್ತಿರ ಸರಿದು) ನನ್ನ ಮಾತನ್ನು ಕೇಳು ಮಿಸೆಸ್ ಹೆಲ್ಮರ್, ನಿನಗೆ ಮರೆವು ಹೆಚ್ಚಾಗಿರಬೇಕು. ಇಲ್ಲವೇ ಪ್ರಪಂಚಜ್ಞಾನವಿಲ್ಲದಿರಬೇಕು. ಆದ್ದರಿಂದ ಒಂದೆರಡು ವಿಷಯಗಳನ್ನು ವಿವರವಾಗಿ ಹೇಳಬೇಕಾಗಿದೆ.

ನೋರಾ :—ನಿನ್ನ ಅರ್ಥವೇನು ?

ಕ್ರಾಗ್‌ಸ್ಟಾಡ್:—ನಿನ್ನ ಗಂಡನು ಖಾಯಿಲೆಯಾಗಿರುವಾಗ್ಗೆ ಇನ್ನೂರು ಐವತ್ತು ಪೌಂಡುಗಳ ಸಾಲಕ್ಕಾಗಿ ನನ್ನ ಹತ್ತಿರ ಬಂದೆ.

ನೋರಾ :—ಇನ್ನಾರಲ್ಲಿ ಹೋಗಬೇಕೋ ತಿಳಿಯದೇ ನಿನ್ನಲ್ಲಿ ಬಂದೆ.

ಕ್ರಾಗ್‌ಸ್ಟಾಡ್:—ಆ ಹಣವನ್ನು ಕೊಡಲು ನಾನು ಒಪ್ಪಿದೆ—

ನೋರಾ :—ಹೌದು—ನೀನು ಕೊಟ್ಟೆ—

ಕ್ರಾಗ್‌ಸ್ಟಾಡ್ :—ಕೊಡುವುದಕ್ಕೆ ಮುಂಚೆ ಕೆಲವು ಕರಾರುಗಳಾದವು. ಆ ಸಮಯದಲ್ಲಿ ನಿನ್ನ ಗಂಡನ ಖಾಯಿಲೆಯೊಂದಲ್ಲದೆ, ಬೇರೊಂದೂ ಈ ಪ್ರಪಂಚದಲ್ಲಿ ಬೇಡದೆ—ಹೇಗಾದರೂ ಮಾಡಿ ಹಣವನ್ನು ಒದಗಿಸಬೇಕೆಂಬ ಆತುರದಲ್ಲಿ ನಮ್ಮ ಕರಾರುಗಳ ಕಡೆಗೆ ನೀನು ಗಮನವನ್ನು ಸ್ವಲ್ಪವೂ ಕೊಟ್ಟಂತೆ ಕಾಣುವುದಿಲ್ಲ. ಆದ್ದರಿಂದ ಅವುಗಳನ್ನು ನಿನ್ನ ಜ್ಞಾಪಕಕ್ಕೆ ತಂದರೇನೂ ಪ್ರಮಾದವಿಲ್ಲ. ನಾನು ಬರೆದು ಸಿದ್ಧಪಡಿಸಿದ ಪತ್ರದ ಆಧಾರದ ಮೇಲೆ ಹಣವನ್ನುಕೊಡಲು ಒಪ್ಪಿದೆ.

ನೋರಾ :—ಹೌದು, ಪತ್ರಕ್ಕೆ ನಾನು ರುಜು ಹಾಕಿದೆ.

ಕ್ರಾಗ್‌ಸ್ಟಾಡ್ :—ಸರಿ, ನಿನ್ನ ರುಜುವಿನ ಕೆಳಗೆ ನಿಮ್ಮ ತಂದೆಯನ್ನು ಜಂಟಿಯಾಗಿ ಸಾಲಕ್ಕೆ ಹೊಣೆಮಾಡಿ ಎರಡು ಮೂರು ಪಂಕ್ತಿ

ಗಳು ಬರೆದಿದ್ದುವು; ಆದಕ್ಕೆ ನಿಮ್ಮ ತಂದೆಯ ರುಜು ಬೇಕಾಗಿತ್ತು.

ನೋರಾ :—ಬೇಕಾಗಿತ್ತು. ನನ್ನ ತಂದೆ ಅದನ್ನು ರುಜು ಮಾಡಿದನು.

ಕ್ರಾಗ್‌ಸ್ಟಾಡ್ :—ನಾನು ತಾರೀಖಿನ ಪಂಙ್ತಿಯನ್ನು ಹಾಗೆಯೇ ಬಿಟ್ಟದ್ದೆ. ಅಂದರೆ ನಿಮ್ಮ ತಂದೆಯೇ ತಾರೀಖನ್ನೂ ಗುರುತು ಹಾಕಬೇಕಾಗಿತ್ತು. ಅದು ನಿನಗೆ ಜ್ಞಾಪಕವಿದೆಯೆ?

ನೋರಾ :—ಹೌದು, ಜ್ಞಾಪಕವಿದೆಯೆಂದು ತೋರುತ್ತೆ—

ಕ್ರಾಗ್‌ಸ್ಟಾಡ್ :—ಆಮೇಲೆ ಟಪಾಲಿನ ಮೂಲಕ ನಿಮ್ಮ ತಂದೆಗೆ ಪತ್ರವನ್ನು ಕಳುಹಿಸಲು ನಿನ್ನ ಕೈಲಿ ಕೊಟ್ಟೆ, ಜ್ಞಾಪಕವಿದೆಯೆ?

ನೋರಾ :—ಹೌದು.

ಕ್ರಾಗ್‌ಸ್ಟಾಡ್ :—ನೀನು ತಕ್ಷಣದಲ್ಲಿಯೇ ಆ ಕೆಲಸವನ್ನು ಮಾಡಿರಬೇಕು. ಯಾಕೆಂದರೆ ಐದಾರು ದಿನಗಳಾದ ಮೇಲೆ ಪತ್ರವನ್ನು ನನ್ನ ಬಳಿ ತಂದು ಕೊಟ್ಟೆ. ನಿಮ್ಮ ತಂದೆ ರುಜು ಅದರಲ್ಲಿತ್ತು. ನಾನು ಹಣವನ್ನು ನಿನಗೆ ಕೊಟ್ಟೆ.

ನೋರಾ :—ಆಗಲಿ; ನಾನು ಕ್ಲುಪ್ತವಾಗಿ ಕಂತುಗಳನ್ನು ಸಲ್ಲಿಸುತ್ತಿಲ್ಲವೆ?

ಕ್ರಾಗ್‌ಸ್ಟಾಡ್ :—ಸ್ವಲ್ಪ ಹೆಚ್ಚುಕಡಿಮೆ ಸಲ್ಲಿಸುತ್ತಿದ್ದೀಯೆ, ಆದರೆ-ಸದ್ಯಃ ಬೇಕಾದ ಮಾತನ್ನು ಆಡೋಣ, ಅದು ನಿನಗೆ ಬಹಳ ಕಷ್ಟಕಾಲವಾಗಿರಬೇಕು—ಅಲ್ಲವೆ?

ನೋರಾ :—ಹೌದು—ಕಷ್ಟಕಾಲವೆ!

ಕ್ರಾಗ್‌ಸ್ಟಾಡ್ :—ಆಗ ನಿಮ್ಮ ತಂದೆಗೆ ಬಹಳ ಖಾಯಿಲೆಯಾಗಿತ್ತಲ್ಲವೆ?

ನೋರಾ :—ಅದು ಅವನ ಅಂತ್ಯಕಾಲವೆಂದೇ ಹೇಳಬೇಕು.

ಕ್ರಾಗ್‌ಸ್ಟಾಡ್ :—ಸ್ವಲ್ಪ ದಿನಗಳಲ್ಲಿಯೇ ಮೃತನಾದನಲ್ಲವೆ?

ನೋರಾ :—ಹೌದು.

ಕ್ರಾಗ್‌ಸ್ಟಾಡ್ :—ಹೇಳು, ಮಿಸೆಸ್ ಹೆಲ್ಮರ್–ನಿಮ್ಮ ತಂದೆ ಸತ್ತ ದಿನವು ನಿನಗೆ ಜ್ಞಾಪಕವಿದೆಯೆ ? ಅಂದರೆ ತಿಂಗಳಲ್ಲಿ ಯಾವ ತಾರೀಖು ?

ನೋರಾ :—ನಮ್ಮ ತಂದೆ ೨೯ ನೇ ಸೆಪ್ಟಂಬರ್ ದಿನ ಕಾಲವಾದನು.

ಕ್ರಾಗ್‌ಸ್ಟಾಡ್ :—ಅದು ಸರಿಯಾದ ತಾರೀಖು, ಅದನ್ನು ನಾನೇ ವಿಚಾರಿಸಿ ತಿಳಿದಿದ್ದೇನೆ, ಅದು ಹಾಗಿದ್ದರೆ—ವ್ಯತ್ಯಾಸವೊಂದು ಇದೆಯಲ್ಲಾ (ಜೋಬಿನಿಂದ ಪತ್ರವನ್ನು ತೆಗೆದು) ಅದಕ್ಕೆ ಸಮಾಧಾನವು ನನಗೆ ತಿಳಿಯದು.

ನೋರಾ :—ಏನು ವ್ಯತ್ಯಾಸ ? ನನಗೊಂದೂ ತಿಳಿಯದು—

ಕ್ರಾಗ್‌ಸ್ಟಾಡ್ :—ಮಿಸೆಸ್ ಹೆಲ್ಮರ್, ವ್ಯತ್ಯಾಸವೇನೆಂದರೆ, ಪತ್ರದಲ್ಲಿ ಮಾತ್ರ ನಿಮ್ಮ ತಂದೆ ಸತ್ತ ಮೂರು ದಿನಗಳನಂತರ ರುಜು ಹಾಕಿದ್ದಾನಲ್ಲ !

ನೋರಾ :—ಇದೇನಿದು ನಿನ್ನ ಅರ್ಥ ? ನನಗೆ ಒಂದೂ ಗೊತ್ತಾಗುವುದಿಲ್ಲ.

ಕ್ರಾಗ್‌ಸ್ಟಾಡ್ :—ನಿಮ್ಮ ತಂದೆಯು ೨೯ನೇ ಸೆಪ್ಟಂಬರು ಕಾಲವಾದನು ; ಆದರೆ ಇಲ್ಲಿ ನೋಡು–ತನ್ನ ರುಜುವನ್ನು ೨ನೇ ಅಕ್ಟೋಬರಿನಲ್ಲಿ ಹಾಕಿದ್ದಾನೆ. ಇದು ವ್ಯತ್ಯಾಸವಲ್ಲವೆ ? (ನೋರಾ ಸುಮ್ಮನಿರುವಳು) ಅದು ಒಂದೇ ಅಲ್ಲ. ಮತ್ತೊಂದು ಆಶ್ಚರ್ಯವೇನೆಂದರೆ " ೨ನೇ ಅಕ್ಟೋಬರ್ " ಮತ್ತು ವರ್ಷ ಇವೆರಡೂ ನಿಮ್ಮ ತಂದೆಯ ಸ್ವಹಸ್ತಾಕ್ಷರದಲ್ಲಿಲ್ಲ. ಅದು ಯಾರ ಅಕ್ಷರಗಳೋ ನನಗೆ ಗೊತ್ತು. ಅದಕ್ಕೆಲ್ಲಾ ಸಮಾಧಾನ ಹೇಳಬಹುದು. ನಿಮ್ಮ ತಂದೆ ತಾರೀಖನ್ನು ಹಾಕುವುದನ್ನು ಮರೆತಿರಬಹುದು. ಮತ್ಯಾರೋ ಒಬ್ಬರು ಸ್ವಲ್ಪ ಹಿಂದುಮುಂದಾಗಿ ಯೋಚನೆಯಿಲ್ಲದೆ, ಅವನು ಕಾಲವಾದದ್ದನ್ನು ತಿಳಿಯದೇ ತಾರೀಖನ್ನು ಆಮೇಲೆ ಸೇರಿಸಿರಬಹುದು.

ಅದರಲ್ಲೇನೂ ಪ್ರಮಾದವಿಲ್ಲ, ಮುಖ್ಯವಾದದ್ದು ಅವನ ರುಜು; "**ಅದು**" ಅವನದು ತಾನೆ, ಮಿಸೆಸ್ ಹೆಲ್ಮರ್ ? ನಿನ್ನ ತಂದೆ ತಾನೆ ಸ್ವಹಸ್ತಾಕ್ಷರದಲ್ಲಿ ರುಜು ಹಾಕಿದ ?

ನೋರಾ:—(ಸ್ವಲ್ಪಹೊತ್ತು ಸುಮ್ಮನಿದ್ದು, ತಲೆಯನ್ನೆತ್ತಿ ಧೈರ್ಯದಿಂದಲೂ ಅನಾದರಣೆಯಿಂದಲೂ ಅವನನ್ನು ದುರುಗುಟ್ಟಿ ನೋಡುತ್ತಾ) ಇಲ್ಲ. ರುಜು ಅವನದಲ್ಲ. ನನ್ನ ತಂದೆಯ ಹೆಸರನ್ನು ನಾನು ಬರೆದೆನು.

ಕ್ರಾಗ್‌ಸ್ಟಾಡ್ :—ನಿನ್ನ ಒಪ್ಪಿಗೆ ಬಹಳ ಅಪಾಯುಕರವೆಂದು ನಿನಗೆ ಗೊತ್ತೆ ?

ನೋರಾ :—ಹೇಗೆ ? ಶೀಘ್ರದಲ್ಲಿಯೇ ನಿನ್ನ ಹಣ ನಿನಗೆ ಸಲ್ಲುವುದು.

ಕ್ರಾಗ್‌ಸ್ಟಾಡ್ :—ಒಂದು ಮಾತನ್ನು ಕೇಳುತ್ತೇನೆ-ಹೇಳು. ನಿಮ್ಮ ತಂದೆಗೆ ಪತ್ರವನ್ನು ಯಾತಕ್ಕೆ ಕಳುಹಿಸಲಿಲ್ಲ ?

ನೋರಾ :—ಆಗುತ್ತಿರಲಿಲ್ಲ. ನನ್ನ ತಂದೆಗೆ ಬಹಳ ಖಾಯಿಲೆ. ಅವನ ರುಜುವನ್ನು ಕೇಳಿದರೆ ಹಣ ಯಾತಕ್ಕೆ ಬೇಕೋ ಅದನ್ನು ಹೇಳಬೇಕಾಗುತ್ತಿತ್ತು. ಅವನೇ ಅಷ್ಟು ನರಳುತ್ತಿರುವಾಗ್ಗೆ ನನ್ನ ಗಂಡನಿಗೂ ಬಹಳ ಖಾಯಿಲೆಯೆಂದು ಹೇಗೆ ಹೇಳುವುದು ? ಅದು ನನಗೆ ಸೂಕ್ತವಾಗಿ ತೋರಲಿಲ್ಲ.

ಕ್ರಾಗ್‌ಸ್ಟಾಡ್ :—ದೇಶ ಸುತ್ತುವ ಯೋಚನೆಯನ್ನೇ ಬಿಟ್ಟಿದ್ದರೆ ಚೆನ್ನಾಗಿತ್ತು.

ನೋರಾ :—ಅದು ಆಗುತ್ತಿರಲಿಲ್ಲ. ನನ್ನ ಗಂಡನ ಜೀವವನ್ನುಳಿಸಲು ನಾವು ಇಟಲಿಗೆ ಹೋದದ್ದು. ಅದನ್ನು ಹೇಗೆ ಬಿಡುವುದಕ್ಕಾಗುತ್ತಿತ್ತು ?

ಕ್ರಾಗ್‌ಸ್ಟಾಡ್ :—ನನ್ನನ್ನು ಮೋಸಮಾಡುತ್ತಿದ್ದೆಯೆಂದು ನಿನ್ನ ಮನಸ್ಸಿಗೆ ಹೊಳೆಯಲೇ ಇಲ್ಲವೆ ?

ನೋರಾ :—ಅದು ನನ್ನ ಯೋಚನೆಗೆ ಬರಲೇ ಇಲ್ಲ. ನಿನ್ನ ವಿಚಾರ ನಾನು ಮನಸ್ಸಿಗೆ ಹಚ್ಚಿಕೊಳ್ಳಲೇ ಇಲ್ಲ. ನಿನ್ನನ್ನು ಕಂಡರೆ

ಆಗುತ್ತಿರಲಿಲ್ಲ ನನಗೆ—ಯಾಕೆಂದರೆ, ನನ್ನ ಗಂಡನು ಅಷ್ಟೊಂದು ನರಳುತ್ತಿರುವಾಗ್ಗೆ ಇಲ್ಲದ ಕಷ್ಟಗಳನ್ನೆಲ್ಲಾ ನನ್ನೆದುರಿಗೆ ನೀನು ಒಡ್ಡಿದೆ.

ಕ್ರಾಗ್‌ಸ್ಟಾಡ್ :—ಮಿಸೆಸ್ ಹೆಲ್ಮರ್-ನಿನ್ನ ತಪ್ಪೇನೆಂಬುದು ನಿನಗೆ ಇನ್ನೂ ಗೊತ್ತಿಲ್ಲವೆಂದು ಕಾಣುತ್ತೆ. ಆದರೆ-ನನ್ನ ಒಂದು ತಪ್ಪು ನಡಿಗೆ, ನನ್ನ ಮರ್ಯಾದೆಯನ್ನೆಲ್ಲಾ ನಾಶಮಾಡಿದುದು-ನಿನ್ನದಕ್ಕಿಂತಲೂ ಹೆಚ್ಚಿಲ್ಲ, ಕಡಿಮೆಯೂ ಇಲ್ಲ ತಿಳಿಯಿತೆ?

ನೋರಾ :—ನೀನು-? ನಿನ್ನ ಹೆಂಡತಿಯ ಜೀವವನ್ನು ಕಾಪಾಡಲು ಧೈರ್ಯದಿಂದ ಇಂತಹ ಕೆಲಸವನ್ನು ಮಾಡಿದೆಯೆಂದು ನಾನು ನಂಬಲೆ?

ಕ್ರಾಗ್‌ಸ್ಟಾಡ್ :—ಕಾನೂನು ನಮ್ಮ ಮನಸ್ಸಿನ ಉದ್ದೇಶಗಳನ್ನು ಎಣಿಸುವುದಿಲ್ಲ!

ನೋರಾ :—ಹಾಗಾದರೆ ಅದು ಹುಚ್ಚು ಕಾನೂನು.

ಕ್ರಾಗ್‌ಸ್ಟಾಡ್ :—ಹುಚ್ಚೋ-ಬೆಪ್ಪೋ-ನಾನು ಈ ಪತ್ರವನ್ನು ಕೋರ್ಟಿನಲ್ಲಿ ತೋರಿಸಿದರೆ, ಕಾನೂನಿಗೆ ನೀನು ಒಳಪಡುತ್ತೀಯೆ.

ನೋರಾ :—ಅದನ್ನು ನಾನು ನಂಬಲಾರೆ. ಸಾಯುತ್ತಿರುವ ತಂದೆಯ ಮನಸ್ಸಿಗೆ ಕ್ಲೇಶವನ್ನುಂಟುಮಾಡದಿರುವುದಕ್ಕೆ ಮಗಳಿಗೆ ಹಕ್ಕಿಲ್ಲವೆ? ಗಂಡನ ಪ್ರಾಣವನ್ನುಳಿಸುವುದಕ್ಕೆ ಕೈ ಹಿಡಿದ ಹೆಂಡತಿಗೆ ಹಕ್ಕಿಲ್ಲವೆ? ಕಾನೂನು ನನಗೆ ಗೊತ್ತಿಲ್ಲ, ಆದರೂ ಇಂತಹ ಕೆಲಸಗಳನ್ನು ಮಾಡುವುದಕ್ಕೆ ಅಪ್ಪಣೆಯಿದೆಯೆಂದು ಖಂಡಿತವಾಗಿಯೂ ನಾನು ತಿಳಿದುಕೊಂಡಿದ್ದೇನೆ. ನೀನು ಒಬ್ಬ ಲಾಯರ್-ನಿನಗೆ ಆ ವಿಷಯಗಳು ಗೊತ್ತಿಲ್ಲವೆ? ಕ್ರಾಗ್‌ಸ್ಟಾಡ್! ನೀನೊಬ್ಬ ತಿಳುವಳಿಕೆಯಿಲ್ಲದ ಲಾಯರು!

ಕ್ರಾಗ್‌ಸ್ಟಾಡ್ :—ಇರಬಹುದು. ಆದರೆ ವ್ಯವಹಾರ ವಿಷಯಗಳಲ್ಲಿ—ನಿನಗೂ ನನಗೂ ಇರುವ ವ್ಯವಹಾರಗಳಲ್ಲಿ, ನನಗೆ ತಿಳುವಳಿಕೆ

ಇಲ್ಲವೆ? ಇರಲಿ, ನೀನೇನು ಬೇಕಾದರೂ ಮಾಡಬಹುದು. ಆದರೆ ಒಂದು ವಿಷಯವನ್ನು ನೆನಪಿಡು, ನನ್ನ ಸ್ಥಿತಿ ಅಥವಾ ನನ್ನ ಪದವಿ ಪುನಃ ಕೆಳಗಾದರೆ ನೀನೂ ನನ್ನೊಡನೆ ಕೆಳಗೆ ಬೀಳುತ್ತೀಯೆ. (ಹಾಗೆ ಹೇಳಿ ತಲೆಬಾಗಿ ನಮಸ್ಕರಿಸಿ, ಹಜಾರದೊಳಗಿನಿಂದ ಮನೆಬಿಟ್ಟು ಹೋಗುವನು)

ನೋರಾ:—(ಸ್ವಲ್ಪಕಾಲ ಯೋಚನೆಯಲ್ಲಿ ಮಗ್ನಳಾಗಿ ಪುನಃ ತಲೆಯನ್ನೆತ್ತಿ) ಏನಿದು ಅಸಂಭವ! ನನ್ನನ್ನು ಹೆದರಿಸುತ್ತಾನೆ! ಅಷ್ಟು ಪೆದ್ದಳಲ್ಲ ನಾನು! (ಮಕ್ಕಳ ಆಟದ ಸಾಮಾನುಗಳನ್ನು ಸರಿಪಡಿಸುತ್ತಾ) ಒಂದು ವೇಳೆ—? ಇಲ್ಲ, ಇಲ್ಲ—! ಎಂದಿಗೂ ಹಾಗಿರಲಾರದು! ನನ್ನ ಪ್ರೀತಿ ಸಾಮ್ರಾಜ್ಯವನ್ನು ಉಳಿಸಿಕೊಳ್ಳಲು ಹಾಗೆ ಮಾಡಿದೆ!

ಮಕ್ಕಳು:—(ಎಡಗಡೆ ಬಾಗಿಲ ಕಡೆಯಿಂದ) ಗುಮ್ಮನು ಮನೆಬಿಟ್ಟು ಹೊರಟುಹೋದನು!

ನೋರಾ:—ಮುದ್ದುಗಳಿರಾ—ಹೌದು - - ಹೌದು! ಆದರೆ ಗುಮ್ಮನು ಇಲ್ಲಿಗೆ ಬಂದಿದ್ದನೆಂದು ಯಾರಿಗೂ ಹೇಳಬೇಡಿ. ಗೊತ್ತಾಯಿತೋ? ನಿಮ್ಮ ತಂದೆಗೂ ಹೇಳಕೂಡದು!

ಮಕ್ಕಳು:—ಹೇಳುವುದಿಲ್ಲ ಅಮ್ಮಾ! ಆಟ ಆಡೋಣ ಬಾ ಅಮ್ಮ!

ನೋರಾ:—ಇಲ್ಲ-ಇಲ್ಲ, ಚಿನ್ನಗಳಿರಾ! ಈಗ ಬೇಡಿ—

ಮಕ್ಕಳು:—ಅಮ್ಮ-ನೀನು ಹೇಳಿದೆ ಪುನಃ ಆಡೋಣವೆಂದು! ಬಾ ಅಮ್ಮ!

ನೋರಾ:—ಹೌದು-ಹೌದು! ನಾನು ಹೇಳಿದ್ದು ನಿಜ. ಈಗ ಬೇಡಿ! ಒಳಗೆ ಓಡಿಹೋಗಿ! ನನಗೆ ತುಂಬಾ ಕೆಲಸವಿದೆ ಮುದ್ದುಗಳಿರಾ, ಒಳಗೆ ಓಡಿಹೋಗಿ! (ಒಬ್ಬೊಬ್ಬರನ್ನಾಗಿ ಮುದ್ದಿಟ್ಟು ಒಳಗೆ ಕಳುಹಿಸುವಳು-ಪುನಃ ಬಾಗಿಲನ್ನು ಹಾಕುವಳು. ಕೊನೆಗೆ ಕಸೂತಿ ಕೆಲಸವನ್ನು ತೆಗೆದುಕೊಂಡು ಒಂದೆರಡು ಹೊಲಿಗೆ ಹಾಕಿ ಪುನಃ ಬಿಟ್ಟು-) ಇಲ್ಲ!!! (ಕಸೂತಿ ಕೆಲಸವನ್ನು ಎಸೆದುಬಿಡುವಳು)

ಹೆಲ್ನ, ಗಿಡವನ್ನು ತೆಗೆದುಕೊಂಡು ಬಾ-(ಎಡಗಡೆ ಒಂದು ಮೇಜಿನ ಬಾಗಿಲು ತೆಗೆದು-ಹಾಗೆಯೇ ನಿಂತು) ಇಲ್ಲ! ಇಲ್ಲ!! ಹಾಗೆಂದಿಗೂ ಆಗಲಾರದು.

ಹೆಣ್ಣಾಳು :—(ಗಿಡವನ್ನು ತೆಗೆದುಕೊಂಡು ಬಂದು) ಅಮ್ಮಾವರೆ? ಗಿಡವನ್ನು ಎಲ್ಲಿ ಇಡಲಿ?

ನೋರಾ :—ಇಲ್ಲಿ-ಚಿಕ್ಕಮನೆಯ ಮಧ್ಯದಲ್ಲಿ!

ಹೆಣ್ಣಾಳು :—ಅಮ್ಮಾವರಿಗೆ ಇನ್ನೇನಾದರೂ ಬೇಕೆ?

ನೋರಾ :—ಏನೂ ಬೇಡ-ನನಗೆ ಬೇಕಾದ್ದೆಲ್ಲಾ ಇದೆ.

(ಹೆಣ್ಣಾಳು ಹೊರಗೆ ಹೋಗುವಳು)

ನೋರಾ :—(ಗಿಡವನ್ನು ಶೃಂಗರಿಸುವಳು) ಇಲ್ಲಿ ಒಂದು ದೀಪ - ಇಲ್ಲಿ ಪುಷ್ಪಗಳು, - - - ಎಂತಹ ಕೆಟ್ಟ ಮನುಷ್ಯ! ಶುದ್ಧ ಅಸಂಬದ್ಧ ಪ್ರಲಾಪ!-ಯಾವ ತಪ್ಪೂ ಇಲ್ಲ! - - ಹಬ್ಬದ ಗಿಡ ಥಳಥಳನೆ ಹೊಳೆಯುತ್ತಿದೆ! ತೊರ್ವಾಲ್ಡ್ - ತೊರ್ವಾಲ್ಡ್ - ನೀನು ಒಪ್ಪುವಂತೆ—ನಿನ್ನ ಮೆಚ್ಚುಗೆಯನ್ನು ಗೆಲ್ಲುವುದಕ್ಕೋಸ್ಕರ ಏನು ಬೇಕಾದರೂ ಮಾಡುತ್ತೇನೆ, ಪ್ರಾಣಪ್ರಿಯ, ತೊರ್ವಾಲ್ಡ್! ನಿನ್ನ ಸಂತೋಷಕ್ಕಾಗಿ ಮಧುರ ಗಾನ ಮಾಡುವೆ - ಪ್ರಿಯ, ನಿನ್ನ ಮನೋಲ್ಲಾಸಕ್ಕಾಗಿ ನಿನ್ನೆದುರಿಗೆ ನರ್ತನಮಾಡುವೆ! ಪ್ರಿಯ, ಪ್ರಿಯ! ತೊರ್ವಾಲ್ಡ್! (ಹೆಲ್ಮರನು ಕೆಲವು ಕಾಗದದ ಸುರುಳಿಗಳನ್ನು ಕಂಕಳಲ್ಲಿಟ್ಟುಕೊಂಡು ಬರುವನು)—ಇಷ್ಟು ಬೇಗ ಬಂದೆಯಾ?

ಹೆಲ್ಮರ್ :—ಬಂದೆ! ಯಾರಾದರೂ ಬಂದಿದ್ದರೆ?

ನೋರಾ :—ಮನೆಗೆ? ಇಲ್ಲ.

ಹೆಲ್ಮರ್ :—ಇದೇನಾಶ್ಚರ್ಯ! ಕ್ರಾಗ್‌ಸ್ಟಾಡ್ ಮನೆಯ ಬಾಗಿಲು ದಾಟಿ ಹೋದದ್ದನ್ನು ನಾನು ನೋಡಿದೆ!

ನೋರಾ:—ಹಾಗೆಯೇ? ಮರೆತೆ—ಕ್ರಾಗ್‌ಸ್ಟಾಡ್ ಇಲ್ಲಿಗೆ ಸ್ವಲ್ಪ ಹೊತ್ತು ಬಂದಿದ್ದನು.

ಹೆಲ್ಮರ್ :—ನೋರಾ, ನಿನ್ನ ತರಹ ನೋಡಿದರೆ ಕ್ರಾಗ್‌ಸ್ಟಾಡ್ ನಿನ್ನ ಶಿಫಾರಶಿಯನ್ನು ಸಂಪಾದಿಸಲು ಬಂದಿದ್ದನೆಂದು ಕಾಣುತ್ತೆ.

ನೋರಾ :—ಹೌದು.

ಹೆಲ್ಮರ್ :—ನೀನು ಸ್ವತಃ ಕೇಳಿದಂತೆ ಇರಬೇಕೆಂದಲ್ಲವೆ? ಅವನು ನಿನ್ನನ್ನು ಬೇಡಲೇ ಇಲ್ಲ, ನೀನೇ ಸ್ವತಃ ಮಾಡಿದಂತಿರಬೇಕು; ಅವನು ಬಂದು ನಿನ್ನನ್ನು ಬೇಡಿದ್ದು ನನಗೆ ಗೊತ್ತಾಗ ಕೂಡದು; ಹೀಗೆ ನೀನು ನಡೆಯಬೇಕೆಂದು ಅವನು ನಿನ್ನನ್ನು ಪ್ರಾರ್ಥಿಸಲಿಲ್ಲವೆ?

ನೋರಾ :—ಹೌದು, ತೊರ್ವಾಲ್ಡ್-ಆದರೆ?

ಹೆಲ್ಮರ್ :—ನೋರಾ! ನೋರಾ! ಅಂಥಾ ಕೆಲಸವನ್ನು ಒಪ್ಪಿಕೊಂಡೆಯಾ? ಅಂಥಾ ಮನುಷ್ಯನೊಡನೆ ನೀನು ಮಾತನಾಡಿದೆಯಾ? ಅವನಿಗೇನಾದರೂ ಮಾತು ಕೊಟ್ಟೆಯಾ? ಇಷ್ಟೂ ಸಾಲದೆ ನನಗೆ ಒಂದು ಸುಳ್ಳು—

ನೋರಾ :—ಸುಳ್ಳು?

ಹೆಲ್ಮರ್ :—ಮನೆಗೆ ಯಾರೂ ಬಂದಿರಲಿಲ್ಲವೆಂದು ಹೇಳಲಿಲ್ಲವೆ? (ಅವಳ ಕಡೆ ಬೆರಳನ್ನಾಡಿಸುತ್ತಾ) ನನ್ನ ಪುಟ್ಟಗಾನ ಪಕ್ಷಿ! ಇನ್ನು ಮೇಲೆ ಹಾಗೆ ಮಾಡಕೂಡದು. ನನ್ನ ಪಕ್ಷಿಯ ಚಂಚು ಪರಿಶುದ್ಧವಾಗಿರಬೇಕು. ಅಪಸ್ವರವೆಂದಿಗೂ ಹೊರಡಕೂಡದು. (ಅವಳ ಸೊಂಟವನ್ನು ಕೈಯಿಂದ ಸುತ್ತಿಟ್ಟು) ನಾನು ಹೇಳುವುದು ಸರಿಯಲ್ಲವೆ? ಹೇಳು ನನ್ನ ಪುಟ್ಟ ಪಕ್ಷಿ! ಹೌದು—ನಾನು ಹೇಳುವುದು ಸರಿ! (ಕೈಯನ್ನು ತೆಗೆದು) ಇನ್ನು ಈ ಮಾತು ಬೇಡ! (ಒಲೆಯ ಹತ್ತಿರ ಕುಳಿತುಕೊಳ್ಳುವನು) ಇಲ್ಲಿ ಎಷ್ಟು ಬೆಚ್ಚಗೆ- ಎಷ್ಟು ಸುಖವಾಗಿ ಇರುವುದು!

ನೋರಾ :—(ಸ್ವಲ್ಪ ಹೊತ್ತಾದಮೇಲೆ-ಗಿಡದ ಅಲಂಕಾರಗಳನ್ನು ಸರಿಪಡಿಸುತ್ತಿರುವಂತೆ ನಟಿಸುತ್ತಾ) ತೊರ್ವಾಲ್ಡ್!

ಹೆಲ್ಮರ್ :—ಏನು?

ನೋರಾ :—ಮನಸ್ಸಿಗೆ ಒಪ್ಪಿದ ಉಡಿಗೆತೊಡಿಗೆಗಳನ್ನುಟ್ಟು ತೊಟ್ಟು ವೇಷಗಳನ್ನು ಧರಿಸಿ ನಾಡಿದ್ದು ಸ್ಟೆನ್‌ಬೋರ್ಗ್ ಏರ್ಪಡಿಸಿರುವ ನೃತ್ಯಕ್ಕೆ ಹೋಗಬೇಕೆಂದು ಬಹಳ ಆಸೆ ಇದೆ.

ಹೆಲ್ಮರ್ :—ನೀನು ಏನು ವೇಷವನ್ನು ಧರಿಸುತ್ತೀಯೋ ನೋಡಬೇಕೆಂದು ನನಗೂ ಕುತೂಹಲವಿದೆ.

ನೋರಾ :—ನಾನು ಹಾಗೆ ಹೇಳಿದ್ದು ಹುಚ್ಚುತನವಲ್ಲವೆ ?

ಹೆಲ್ಮರ್ :—ನಿನ್ನ ಮಾತಿಗೇನರ್ಥ ?

ನೋರಾ :—ಸರಿಯಾದ ವೇಷವೊಂದೂ ಮನಸ್ಸಿಗೆ ಹೊಳೆಯುವುದಿಲ್ಲ. ಮನಸ್ಸಿಗೆ ತೋರಿದವುಗಳೆಲ್ಲವೂ ಕೆಲಸಕ್ಕೆ ಬಾರದವುಗಳಾಗಿವೆ.

ಹೆಲ್ಮರ್ :—ನನ್ನ ಪುಟ್ಟ ನೋರಾ—ಕೊನೆಗೆ ಅದನ್ನು ಒಪ್ಪಿಕೊಳ್ಳುತ್ತಾಳೆಯೊ ?

ನೋರಾ :—(ಅವನ ಕುರ್ಚಿಯ ಹಿಂದೆ ನಿಂತುಕೊಂಡು ಅದರ ಹಿಂಭಾಗವನ್ನು ತನ್ನ ಕೈಯ್ಯಲ್ಲಿ ಹಿಡಿದು) ತೊರ್ವಾಲ್ಡ್, ನಿನಗೆ ತುಂಬಾ ಕೆಲಸವಿದೆಯೆ ?

ಹೆಲ್ಮರ್ :—ಆ !

ನೊರಾ :—ಈ ಕಾಗದಗಳೆಲ್ಲ ಏನು ?

ಹೆಲ್ಮರ್ :—ಬ್ಯಾಂಕಿಗೆ ಸೇರಿದ ಕಾಗದಗಳು.

ನೋರಾ :—ಆಗಲೆ ?

ಹೆಲ್ಮರ್ :—ಕೆಲಸದಿಂದ ನಿವೃತ್ತನಾಗುವ ಮುಖ್ಯಾಧಿಕಾರಿ ನಾನು ಏನು ಬದಲಾವಣೆಗಳನ್ನು ಬೇಕಾದರೂ ಮಾಡಬಹುದೆಂದು ನನಗೆ ಅಪ್ಪಣೆ ಕೊಟ್ಟಿದ್ದಾನೆ. ಆದ್ದರಿಂದ ಹೊಸ ವರ್ಷಕ್ಕೆ ಸಿದ್ಧವಾಗಿರುವಂತೆ ಈ ಒಂದು ವಾರ ಎಲ್ಲವನ್ನೂ ಸರಿಪಡಿಸಿಕೊಳ್ಳಬೇಕಾಗುತ್ತೆ.

ನೋರಾ :—ಆದರಿಂದಲೇಯೋ–ಅಯ್ಯೋ ಪಾಪ–ಕ್ರಾಗ್‌ಸ್ಟಾಡ್—

ಹೆಲ್ಮರ್ :—ಹುಂ.

ನೋರಾ :—(ಅವನ ತಲೆಯ ಕೂದಲನ್ನು ಸವರುತ್ತಾ) ನಿನಗೆ ಇಷ್ಟೊಂದು ಕೆಲಸವಿಲ್ಲದೆ ಇದ್ದಲ್ಲಿ, ನಿನ್ನಲ್ಲೇನೋ ಒಂದು ದೊಡ್ಡ ಪ್ರಾರ್ಥನೆಯನ್ನು ಮಾಡಬೇಕೆಂದಿದ್ದೆ.

ಹೆಲ್ಮರ್ :—ಅದೇನದು–ಹೇಳು.

ನೋರಾ :—ನಿನ್ನಂತಹ ರಸಿಕನನ್ನೇ ನಾನು ನೋಡಲಿಲ್ಲ. ನಾಡಿದ್ದು ನೃತ್ಯಕ್ಕೆ ಚೆನ್ನಾಗಿ ಅಲಂಕಾರ ಮಾಡಿಕೊಂಡು ಹೋಗಬೇಕೆಂದಿದ್ದೇನೆ. ತೊರ್ವಾಲ್ಡ್–ನಾನು ಯಾವ ವೇಷ ವನ್ನು ಹಾಕಿಕೊಳ್ಳಲಿ? ಯಾವಉಡುಪನ್ನು ಧರಿಸಲಿ? ಸ್ವಲ್ಪ ಯೋಚಿಸಿ ನನಗೆ ಸಹಾಯ ಮಾಡುತ್ತೀಯಾ ?

ಹೆಲ್ಮರ್ :—ಆಹಾ! ಈ ಪುಟ್ಟ ಹಠವಾದಿ ಹುಡುಗಿಗೆ ಮತ್ತೊಬ್ಬರ ಸಹಾಯವೀಗ ಬೇಕಾಗಿದೆಯೋ?

ನೋರಾ :—ಹೌದು, ತೊರ್ವಾಲ್ಡ್, ನಿನ್ನ ಸಹಾಯವಿಲ್ಲದೆ ನಾನು ಏನು ಮಾಡಲೂ ಆಗುವುದಿಲ್ಲ.

ಹೆಲ್ಮರ್ :—ಹಾಗೆಯೇ ಆಗಲಿ, ಏನಾದರೂ ಯೋಚನೆ ಮಾಡೋಣ.

ನೋರಾ :—ನೀನು ಎಷ್ಟು ಒಳ್ಳೆಯವನು; (ಗಿಡದ ಹತ್ತಿರ ಹೋಗಿ-- ಸ್ವಲ್ಪ ಹೊತ್ತಾದಮೇಲೆ--) ನೋಡು ಈ ಕೆಂಪುಹೂಗಳು; ಎಷ್ಟು ಚೆನ್ನಾಗಿವೆ.—ಅದು ಸರಿ ಹೇಳು—ಕ್ರಾಗ್‌ಸ್ಟಾಡ್ ಮಾಡಬಾರದ ಅಂಥಾ ಕೆಟ್ಟದ್ದನ್ನೇನಾದರೂ ಮಾಡಿದ್ದಾನೆಯೆ?

ಹೆಲ್ಮರ್ :—ಮತ್ತೊಬ್ಬರ ಹೆಸರಿನ ರುಜುಮಾಡಿದ, ಅದರರ್ಥವೇ ನೆಂದು ನಿನಗೆ ಗೊತ್ತೆ?

ನೋರಾ :—ಯಾವದೋ ಒಂದು ಕಷ್ಟದ ನಿರ್ಬಂಧಕ್ಕೆ ಸಿಕ್ಕಿ ಹಾಗೆ ಮಾಡಿರಬಹುದು.

ಹೆಲ್ಮರ್ :—ಹೌದು. ಅಥವಾ ಬುದ್ಧಿಗೇಡಿತನದಿಂದ ಮಾಡಿರಬ ಹುದು. ಏನೋ ಒಂದು ಸಾರಿ ಹೆಜ್ಜೆ ನಡೆದು ತಪ್ಪಿದರೆ

ಅದಕ್ಕೋಸ್ಕರಲೆ ಅವನನ್ನು ನಿತ್ಯಶಿಕ್ಷೆಗೆ ಗುರಿಮಾಡುವಷ್ಟು ಕಠಿನ ಹೃದಯವು ನನಗಿಲ್ಲ.

ನೋರಾ :—ನೀನು ಹಾಗೆ ನಡೆಯತಕ್ಕವನಲ್ಲ. ಹಾಗೆಂದಾದರೂ ಮಾಡಲೊಡಂಬಡುತ್ತೀಯಾ ?

ಹೆಲ್ಮರ್ :—ಎಷ್ಟೋ ಜನರು ಮಾಡಿದ ತಪ್ಪನ್ನು ಒಪ್ಪಿಕೊಂಡು ಅದಕ್ಕೆ ತಕ್ಕ ಶಿಕ್ಷೆಯನ್ನನುಭವಿಸಿ ಅನಂತರ ಸನ್ಮಾರ್ಗಾವಲಂಬಿಗಳಾಗಿರುವುದನ್ನು ನಾನೇ ನೋಡಿದ್ದೇನೆ.

ನೋರಾ :—ಶಿಕ್ಷೆ—?

ಹೆಲ್ಮರ್ :—ಕ್ರಾಗ್‌ಸ್ಟಾಡ್ ಹಾಗೇನೂ ಮಾಡಲಿಲ್ಲ. ಯಾವುದೋ ಒಂದು ಉಪಾಯದಿಂದ ಕಳ್ಳ ತಪ್ಪಿಸಿಕೊಂಡು ಬಂದು, ಕ್ಷೀಣ ದೆಶೆಯಲ್ಲೇ ನಡೆಯುತ್ತಿದ್ದಾನೆ.

ನೋರಾ :—ಹಾಗಾದರೆ ಇಂತಹ ಸಂದರ್ಭಗಳಲ್ಲಿ—?

ಹೆಲ್ಮರ್ :—ನೀನೇ ಸ್ವಲ್ಪಯೋಚಿಸು, ನೋರಾ. ಹಾಗೆ ತಪ್ಪುಮಾಡಿದ ಮನುಷ್ಯನು, ಸ್ನೇಹಿತರು ಜೊತೆಗಾರರೊಂದಿಗೆ ಸುಳ್ಳು, ತಟವಟಗಳನ್ನು ಹೇಳುತ್ತಾ ತನ್ನ ಬಂಧು ಬಳಗದವರ ಮುಂದೆ ಬೇರೊಂದು ಮುಖವಾಡವನ್ನು ಹಾಕಿಕೊಂಡು ತಿರುಗಾಡುತ್ತಾ ಹೆಂಡತಿ ಮಕ್ಕಳನ್ನು ಮೋಸಗೊಳಿಸುತ್ತಾ ಕಾಲವನ್ನು ಕಳೆಯುತ್ತಿರುತ್ತಾನೆ. ಅವನ ಮಕ್ಕಳು-ಅವರುಗಳ ಗತಿಯೇನು-ಅಯ್ಯೋ-ದುಸ್ಸಹ! ಕಣ್ಣಾರ ನೋಡಲಾಗುವುದಿಲ್ಲ.

ನೋರಾ :—ಹೇಗೆ-? ಯಾಕೆ-?

ಹೆಲ್ಮರ್ :—ಯಾಕಂದರೆ ಸುಳ್ಳಾಡುವವನ ಮನೆ ವಿಷ ತುಂಬಿದ ಮನೆಯಂತೆ. ಆ ಮನೆಯಲ್ಲಿ ಮಕ್ಕಳು ಪ್ರತಿ ಉಸುರಿನಲ್ಲೂ ಏನಾದರೂ ವಿಷಕ್ರಿಮಿಯನ್ನು ಹೀರುತ್ತಿರುವದು.

ನೋರಾ :—(ಅವನ ಹತ್ತಿರ ಸರಿದು) ನಿನ್ನ ಈ ಮಾತು ನಿಜವೆ?

ಹೆಲ್ಮರ್ :—ಪ್ರಿಯೆ, ಲಾಯರಾಗಿ ನನಗೆ ಇದು ಗೊತ್ತಿಲ್ಲವೆ ? ದಿನ ಬೆಳಗಾದರೆ ಇಂತಹವರು ಸಿಕ್ಕುತ್ತಾರೆ. ಸಾಧಾರಣವಾಗಿ

ಪೂರ್ವವಯಸ್ಸಿನಲ್ಲಿ ಕೆಟ್ಟತನಕ್ಕೆ ಬಿದ್ದವರಿಗೆಲ್ಲರಿಗೂ ಮೋಸಗಾತಿ ತಾಯಿಯರಿರುವರು.

ನೋರಾ :—ಯಾತಕ್ಕೆ—ತಾಯಿ ಮಾತ್ರ ಯಾತಕ್ಕೆ—?

ಹೆಲ್ಮರ್ :—ಮುಕ್ಕಾಲು ಮೂರು ವೀಸಪಾಲು ತಾಯಿಯ ಚಾಲ್ ಮಕ್ಕಳಿಗೆ ಹೆಚ್ಚಾಗಿ ಬರುವುದು. ತಂದೆಯ ಚಾಲೂ ಬರಬಹುದು, ಇಲ್ಲವೆಂದು ಹೇಳುವುದಿಲ್ಲ. ಲಾಯರುಗಳಾದ ನಮಗೆ ಇದು ಚೆನ್ನಾಗಿ ಗೊತ್ತು. ಈ ಕ್ರಾಗ್‌ಸ್ಟಾಡ್ ಇದ್ದಾನಲ್ಲ! ಅಹನ್ಯಹನಿ ತನ್ನಸ್ವಂತ ಮಕ್ಕಳೆದುರಿಗೆ ಮೋಸ ತಟವಟಗಳನ್ನು ನಡೆಸುತ್ತಿದ್ದಾನೆ. ಅದಕ್ಕೋಸ್ಕರವೇ ಶೀಲಹೀನನಾಗಿ ತನ್ನ ಗೌರವವನ್ನು ಕಳೆದು ಕೊಂಡಿದ್ದಾನೆ. (ತನ್ನ ಕೈಯನ್ನು ಮುಂದೆ ನೀಡಿ) ಅದಕ್ಕೋಸ್ಕರಲೇ ನನ್ನ ಪುಟ್ಟ ನೋರಾ ಅವನ ಪರವಾಗಿ ಶಿಫಾರಸು ಮಾಡಬಾರದು. ಎಲ್ಲಿ ನನ್ನ ಕೈಮುಟ್ಟು ಮಾತುಕೊಡು, ಬಾ, ಬಾ. ಇದೇನಿದು ? ನನಗೆ ಕೈಕೊಡು, ಆ, ಒಳ್ಳೆಹುಡುಗಿ! ಇನ್ನು ಈ ವಿಷಯವೊಂದು ಇತ್ಯರ್ಥವಾಯಿತು. ಅವನ ಜೊತೆಯಲ್ಲಿ ಕುಳಿತು ಕೆಲಸಮಾಡುವುದು ಬಹಳ ಕಷ್ಟವಾಗುತ್ತಿತ್ತು. ಅಂಥವರೊಡನೆ ಕೆಲಸವೆಂದರೆ ನಿಜವಾಗಿಯೂ ನನಗೆ ಮೈಯುರಿದು ಬಿಡುತ್ತೆ.

ನೋರಾ :—(ಕೈ ಬಿಡಿಸಿಕೊಂಡು ಗಿಡದ ಹಿಂಭಾಗಕ್ಕೆ ಹೋಗಿ) ಇದೇನು ಇಷ್ಟು ಶೆಖೆ! ಕೆಲಸ ತುಂಬಿದೆ!

ಹೆಲ್ಮರ್ :—(ಎದ್ದು ಕಾಗದಗಳನ್ನೆಲ್ಲಾ ಸರಿಯಾಗಿ ಜೋಡಿಸಿಟ್ಟು) ನಾನೂ ಕೂಡ ಊಟಕ್ಕೆ ಮುಂಚೆ ಕೆಲವು ಕಾಗದಗಳನ್ನು ನೋಡಬೇಕು. ನಿನ್ನಉಡುಪಿನ ವಿಷಯವನ್ನು ಯೋಚಿಸ ಬೇಕಾಗಿದೆ. ನಿನಗೋಸ್ಕರ ರೇಷ್ಮೆಯಲ್ಲಿ ಕಟ್ಟಿ ಏನಾದರೂ ಒಂದು ಗಂಟನ್ನು ಗಿಡದ ಕೊಂಬೆಯಮೇಲೆ ತಗುಲಿ ಹಾಕಬೇಕು. (ಅವಳ ತಲೆಯನ್ನು ಸವರುತ್ತಾ) ನನ್ನ ಮಧುರವಾಣಿ ನನ್ನ

ಪುಟ್ಟ ಹಕ್ಕಿ. (ಮುತ್ತು ಕೊಟ್ಟು ತನ್ನ ಚಿಕ್ಕ ಮನೆಗೆ ಹೋಗಿ ಬಾಗಿಲು ಹಾಕಿ ಕೊಳ್ಳುವನು.)

ನೋರಾ :—(ಸ್ವಲ್ಪ ಹೊತ್ತಾದಮೇಲೆ ಪಿಸು ಗುಟ್ಟುತ್ತಾ) ಇಲ್ಲ, ಇಲ್ಲ ನಿಜವಲ್ಲ! ಹಾಗೆಂದಿಗೂ ಇರಲಾರದು! ಇರಲೇ ಆರದು (ದಾದಿಯು ಎಡಗಡೆ ಚಿಕ್ಕಮನೆಯ ಬಾಗಿಲು ತೆಗೆಯುವಳು)

ದಾದಿ :—ಮಕ್ಕಳು ಅಮ್ಮನ ಹತ್ತಿರ ಬರಬೇಕೆಂದು ತಂಟೆಮಾಡು ತ್ತಿವೆ.

ನೋರಾ :—ಇಲ್ಲ, ಇಲ್ಲ, ಇಲ್ಲ, ನನ್ನ ಹತ್ತಿರ ತರಬೇಡ, ನೀನೇ ಅವರ ಜೊತೆಯಲ್ಲಿ ಆಡುತ್ತಿರು—

ದಾದಿ :—ಹಾಗೆಯೇ ಆಗಲಿ ತಾಯಿ (ಬಾಗಿಲು ಹಾಕಿಕೊಳ್ಳುವಳು.)

ನೋರಾ :—(ದಿಗಿಲಿನಿಂದ ಮುಖ ಕೆಟ್ಟು) ನನ್ನ—ಮಕ್ಕಳನ್ನು ಕೆಡಿಸುವುದೆ?—ನನ್ನ ಮನೆಯಲ್ಲಿ ವಿಷ ತುಂಬುವುದೆ—? (ಸ್ವಲ್ಪ ಸುಮ್ಮನಿದ್ದು-ತಲೆಯೆತ್ತಿ) ನಿಜವಲ್ಲ—ನಿಜವಿರಲಾರದು.

(ಮೊದಲನೆಯ ಅಂಕವು ಮುಗಿದುದು.)

# ಎರಡನೇ ಅಂಕ

(ದೃಶ್ಯ :-ಮೊದಲನೇ ಅಂಕದಂತೆಯೆ ಕ್ರಿಸ್‌ಮಸ್ ಗಿಡವು ಒಂದು ಮೂಲೆಯಲ್ಲಿದೆ. ಅಲಂಕಾರಗಳೆಲ್ಲಾ ತೆಗೆಯಲ್ಪಟ್ಟಿವೆ. ಉರಿದುಹೋದ ಮೇಣದಬತ್ತಿಗಳ ತುಂಡುಗಳು ಬತ್ತಿ ಬಾಡಿ ಜೋತಾಡುತ್ತಿರುವ ಕೊಂಬೆಗಳ ತುದಿಯಲ್ಲಿ ನೇತಾಡುತ್ತಿವೆ. ಮತ್ತೆ ಕುರ್ಚಿಯಮೇಲೆ ನೋರಾಳ ಮೇಲಂಗಿಯೂ ಟೋಪಿಯೂ ಇವೆ. ಒಬ್ಬಳೇ ಚಿಕ್ಕಮನೆಯಲ್ಲಿ ಶತಪಥ ಸುತ್ತುತ್ತಿದಾಳೆ. ಕುರ್ಚಿಯ ಸಮೀಪಕ್ಕೆ ಬಂದು ಮೇಲಂಗಿಯನ್ನು ತೆಗೆದುಕೊಂಡು)

ನೋರಾ :—(ಅಂಗಿಯನ್ನು ಕೆಳಗೆ ಹಾಕಿ) ಯಾರೋ ಬರುವಂತಿದೆ! (ಬಾಗಿಲ ಹತ್ತಿರ ಹೋಗಿ ಆಲಿಸಿ ಕೇಳಿ) ಇಲ್ಲ ಯಾರೂ ಇಲ್ಲ. ಯಾರು ತಾನೆ ಬರುತ್ತಾರೆ—?ಹಬ್ಬದ ದಿನ ಒಬ್ಬರೂ ಬರುವುದಿಲ್ಲ. ಈ ಹೊತ್ತು ಇಲ್ಲ. ನಾಳೆಯೂ ಬರುವುದಿಲ್ಲ. ಆದರೆ-ಸುಮಾರು (ಬಾಗಿಲನ್ನು ತೆಗೆದು ನೋಡಿ) ಕಾಗದದ ಪೆಟ್ಟಿಗೆಯಲ್ಲಿಯೂ ಏನೂ ಇಲ್ಲ. ಬರಿದಾಗಿದೆ. (ಮುಂದೆ ಬಂದು) ಇದೇನಿದು ತುಚ್ಛವಿಷಯ ?—ಅವನೆಂದಿಗೂ ಹಾಗೆ ಮನಸ್ಸು ಮಾಡಿರಲಾರ. ಅಂಥಾ ವಿಷಯಗಳೆಂದಿಗೂ ನಡೆಯಲಾರವು. ಅಸಂಭವ! ಅಸಂಭವ! ನಾನು ಮೂರು ಮಕ್ಕಳ ತಾಯಿಯಲ್ಲವೆ! (ದಾದಿ ದೊಡ್ಡದಾದ ರಟ್ಟಿನ ಪೆಟ್ಟಿಗೆಯೊಂದನ್ನು ಹಿಡಿದುಕೊಂಡು ಎಡಗಡೆ ಚಿಕ್ಕಮನೆ ಬಾಗಿಲು ತೆಗೆದುಕೊಂಡು ಒಳಗೆ ಬರುವಳು.)

ದಾದಿ :—ನಿಮ್ಮ ವಿಲಾಸದ ಉಡುಪು ಕೊನೆಗೆ ಸಿಕ್ಕಿತು. ಈ ಪೆಟ್ಟಿಗೆಯಲ್ಲಿದೆ.

ನೋರಾ :—ಸಂತೋಷ ; ಆ ಮೇಜಿನ ಮೇಲಿಡು.

ದಾದಿ :—(ಇಟ್ಟು) ಆದರೆ ಒಂದೆರಡು ಕಡೆ ಅದನ್ನು ಸರಿಪಡಿಸಬೇಕಾಗಿದೆ.

ನೋರಾ :—ಅದನ್ನು ಹರಿದು ಚಿಂದಿಮಾಡಿಬಿಡಲೆ? ಎನ್ನಿಸುತ್ತೆ!

ದಾದಿ :—ಏನಮ್ಮ ನಿಮ್ಮ ಮಾತು? ಸ್ವಲ್ಪ ಸಹನೆಯೊಂದಿದ್ದರೆ ಸರಿ ಮಾಡಬಹುದು.

ನೋರಾ :—ಹೌದು, ಹೌದು—ನಾನು ಮಿಸೆಸ್ ಲಿಂಡ್‌ಳನ್ನು ಕರೆದುಕೊಂಡು ಬಂದು ಅವಳ ಸಹಾಯದಿಂದ ಸರಿಮಾಡುತ್ತೇನೆ.

ದಾದಿ :—ಏನು, ಪುನಃ ಹೊರಗೆ ಹೋಗುತ್ತೀರಾ? ಮನೆಯ ಹೊರಗೆ ಮುಖವಿಡಲಾಗುವುದಿಲ್ಲ. ಶೀತದಿಂದ ಖಾಯಿಲೆ ಬಿದ್ದೀರಮ್ಮಾ-ಹೊರಗೆ ಬಹಳ ಚಳಿ!

ನೋರಾ :—ಖಾಯಿಲೆಯೊಂದಲ್ಲ. ಏನು ಬೇಕಾದರೂ ಆಗಬಹುದು. ಮಕ್ಕಳು ಹೇಗಿದ್ದಾರೆ?

ದಾದಿ:—ಪಾಪ. ಕ್ರಿಸ್‌ಮಸ್ ಬಹುಮಾನದ ಆಟದ ಸಾಮಾನುಗಳನ್ನು ಇಟ್ಟುಕೊಂಡು ಆಡುತ್ತಿದಾರೆ—ಆದರೆ—!

ನೋರಾ :—ನನ್ನನ್ನೇನಾದರೂ ಕೂಗುತ್ತಾ ಇವೆಯೆ?

ದಾದಿ :—ಅಲ್ಲವೆ ಮತ್ತೆ? ನಿಮ್ಮ ಜೊತೆಯಲ್ಲಿ ಆಟವಾಡಿಕೊಂಡಿರುವುದು ಅವುಗಳಿಗೆ ಅಭ್ಯಾಸವಾಗಿಬಿಟ್ಟಿದೆ.

ನೋರಾ :—ಹೌದು, ಆದರೆ ನಾನು ಮೊದಲಿನಂತೆ ಅಷ್ಟು ಹೊತ್ತು ಮಕ್ಕಳೊಂದಿಗೆ ಆಟವಾಡಿಕೊಂಡಿರುವುದಕ್ಕಾಗುವುದಿಲ್ಲ.

ದಾದಿ :—ಆಯಿತು; ಮಕ್ಕಳೇನು, ಎಲ್ಲಾದರೂ ಒಗ್ಗಿಕೊಂಡಿರುತ್ತಾರೆ.

ನೋರಾ :—ಹಾಗೇನು? ಮನೆಯನ್ನು ಬಿಟ್ಟು ಹೊರಟುಹೋದರೆ ಹೆತ್ತ ತಾಯನ್ನೂ ಮರೆತುಬಿಡುವವೆ?

ದಾದಿ :—ಏನು ಹೇಳಿದಿರಿ? ಮನೆಯನ್ನು ಬಿಟ್ಟು ಹೋಗುವುದೆಂದರೇನರ್ಥ?

ನೋರಾ :—ಇಲ್ಲಿ ನೋಡು ದಾದಿ—ಎಷ್ಟೋ ದಿವಸದಿಂದ ನಿನ್ನನ್ನ ಒಂದು ಮಾತು ಕೇಳಬೇಕೆಂದಿದ್ದೆ. ಕಂಡವರ ಹತ್ತಿರ ನಿನ್ನ ಮಗುವನ್ನು ಬಿಟ್ಟುಬರಲು ನಿನಗೆ ಮನಸ್ಸು ಹೇಗೆ ಬಂತು?

ದಾದಿ :—ನನ್ನ ಪುಟ್ಟ ನೋರಾವಿನ ದಾದಿಯಾಗಿರಬೇಕಾಗಿದ್ದರೆ ಹಾಗೆ ಮಾಡಬೇಕಾಗಿ ಬಂತು.

ನೊರಾ :—ಸರಿ-ಸರಿ-ನಿನಗೆ ಮನಸ್ಸು ಹೇಗೆ ಬಂತು ?

ದಾದಿ :—ಏನು ? ನನಗೆ ಇಂಥಾ ಒಳ್ಳೇ ಸ್ಥಳ ಸಿಕ್ಕುವಾಗ ? ಕಷ್ಟಕ್ಕೆ ಸಿಕ್ಕಿ ಜನದ ಬಾಯಲ್ಲಿದ್ದ ನನ್ನಂಥಾ ಬಡಪಾಯಿಯ ಪುಣ್ಯ ವೆನ್ನಬೇಕು ! ಅಲ್ಲದೆ, ಆ ಹಾಳಾದವನು ನನಗೇನೂ ಸಹಾಯ ಮಾಡಲಿಲ್ಲ.

ನೋರಾ :—ನಿನ್ನ ಮಗಳು ನಿನ್ನನ್ನು ಮರೆತುಬಿಟ್ಟಿರಬಹುದಲ್ಲವೆ !

ದಾದಿ :—ಎಂದಿಗೂ ಇಲ್ಲ. ದೇವರಿಗೆ ಹರಕೆ ಕಟ್ಟಿದಾಗ, ಅನಂತರ ಮದುವೆ ಕಾಲದಲ್ಲಿ ನನಗೆ ಕಾಗದವನ್ನು ಬರೆದಿದ್ದಳು.

ನೋರಾ :—(ದಾದಿಯ ಕತ್ತಿನ ಸುತ್ತ ಕೈಹಾಕಿ ಅಂಗಲಾಚಿ ತಬ್ಬಿ ಕೊಂಡು) ಅಮ್ಮ ಆನ್—ನನ್ನ ಚಿಕ್ಕಂದಿನಲ್ಲಿ ನೀನೇ ನನಗೆ ಒಳ್ಳೆ ತಾಯಿಯಂತಿದ್ದೆಯಮ್ಮ !

ದಾದಿ :—ನನ್ನ ಪುಟ್ಟ ನೋರಾವಿಗೆ ನನ್ನ ಬಿಟ್ಟು ತಾಯಿ ಯಾರೂ ಇರಲಿಲ್ಲ.

ನೋರಾ :—ನನ್ನ ಮಕ್ಕಳುಗಳೂ ಕೂಡ ತಾಯಿಯಿಲ್ಲದ ತಬ್ಬಲಿಗ ಳಾದರೆ ನಿಜವಾಗಿಯೂ ನೀನು—ಇದೇನಿದು ಸಿಕ್ಕಾಪಟ್ಟೆ ಹರ ಟುತ್ತಿದೇನೆ ? (ಪೆಟ್ಟಿಗೆಯನ್ನು ತೆಗೆದು ನೋಡುತ್ತಾ) ಮಕ್ಕಳನ್ನು ನೋಡಿಕೊ ಹೋಗು. ನಾನೀಗ ಖಂಡಿತವಾಗಿಯೂ-ನಾನು ನಾಳೆ ಹೇಗೆ ಅಲಂಕಾರ ಮಾಡಿಕೊಳ್ಳುತ್ತೇನೋ ನೀನೇ ನೋಡುವೆಯಂತೆ.

ದಾದಿ :—ನಾಳೆಯ ನೃತ್ಯಗೋಷ್ಠಿಯಲ್ಲಿ ನಿನ್ನ ಸೌಂದರ್ಯ ಯಾರಿಗೂ ಇರುವುದಿಲ್ಲ, ನನಗೆ ಗೊತ್ತು—(ಎಡಗಡೆ ಚಿಕ್ಕಮನೆಯೊಳಕ್ಕೆ ಹೋಗುವಳು)

ನೋರಾ :—(ಪೆಟ್ಟಿಗೆಯೊಳಗಿನ ಬಟ್ಟೆಯನ್ನು ಬಿಚ್ಚುತ್ತಾ ಸ್ವಲ್ಪ ಹೊತ್ತಾ ದಮೇಲೆ ಪೆಟ್ಟಿಗೆಯನ್ನು ಒಂದುಕಡೆಗೆ ನೂಕಿಬಿಟ್ಟು) ಮನೆ ಬಿಟ್ಟು ಹೊರಕ್ಕೆ ಹೋಗಲು ಧೈರ್ಯವೊಂದಿದ್ದರೆ ! ಒಳಕ್ಕೆ ಯಾರೂ ಬರದೇ ಇದ್ದರೆ ! ಈ ಮಧ್ಯ ಇಲ್ಲಿ ಏನೂ ಆಗುವುದಿಲ್ಲವೆಂಬ ಭರವಸೆಯಿದ್ದರೆ! ಛಿ ! ಏನೇನೋ ಹುಚ್ಚುಮಾತು ! ಏನೇನೋ

ಹುಚ್ಚುಮಾತು! ಯಾರೂಬರುವುದಿಲ್ಲ. ಆದರೆ ಮನಸ್ಸಿಗೆಮಾತ್ರ ಯೋಚನೆಯನ್ನು ಹಚ್ಚಿಸಿಕೊಳ್ಳಬಾರದು. ಈಗ ಈ ಬಟ್ಟೆಯ ಧೂಳು ಒರಸೋಣ. ಆಹಾ-ಎಂಥಾ ಸೊಗಸಾದಕೈಚೀಲಗಳು. (ಹಾಗೆಯೇ ಯೋಚಿಸುತ್ತಾ) ಎಲ್ಲವನ್ನೂ ಮರೆತುಬಿಡಬೇಕು. ಖಂಡಿತ ಮರೆತುಬಿಡಬೇಕು - - - ಒಂದು-ಎರಡು-ಮೂರು-ನಾಲ್ಕು-ನಾಲ್ಕು-ಐದು - - ಆರು-ಆರು - - (ಕಿರಚುವಳು) ಆ-ಯಾರೋ ಒಳಗೆ ಬರುವಂತಿದೆ. (ಬಾಗಿಲ ಕಡೆ ಸರಿದು ಯೋಚಿಸುತ್ತಾ ಏನೂ ತೋಚದೆ ನಿಲ್ಲುವಳು.) (ಮಿಸೆಸ್ ಲಿಂಡ್ ಟೋಪಿಯನ್ನೂ ಮೇಲಂಗಿಯನ್ನೂ ಹಜಾರದಲ್ಲಿಟ್ಟು ಒಳಗೆ ಬಂದು)

ನೋರಾ :—ಓ—ನೀನೇ ಕ್ರಿಸ್ಟೀನ್. ಹೊರಗೆ ಇನ್ನು ಯಾರೂ ಇಲ್ಲ ತಾನೆ? ನೀನು ಬಂದದ್ದು ಎಷ್ಟೋ ಸಂತೋಷವಾಯಿತು.

ಲಿಂಡ್ :—ನನ್ನನ್ನು ಹುಡುಕಿಕೊಂಡು ಬಂದಿದ್ದೆಯೆಂದು ತಿಳಿಯಿತು.

ನೋರಾ :—ಹೌದು. ಆ ದಾರಿಯಲ್ಲೇ ಬರುತ್ತಾ ಇದ್ದೆ. ಏನೆಂದರೆ ನೀನು ನನಗೊಂದು ಸಹಾಯ ಮಾಡಬಲ್ಲೆ. ಬಾ ಇಲ್ಲಿ ಈ ಕುರ್ಚಿಯಮೇಲೆ ಕುಳಿತುಕೊಳ್ಳೋಣ. (ಮೆತ್ತೆ ಕುರ್ಚಿಯ ಮೇಲೆ ಕೂರುವರು) ನೋಡು-ನಾಳೆ ಸ್ಟೇನ್ ಬೋರ್ಗ್‌ನ ಮನೆಯಲ್ಲಿ ವೇಷನೃತ್ಯದ ಸಂತೋಷ ಕೂಟವೊಂದು ನಡೆಯುವುದು. ನಿಯಾಪಾಲಿಟನ್ ಬೆಸ್ತರ ಹುಡುಗಿಯಂತೆ ವೇಷ ಹಾಕಿಕೊಂಡು ನರ್ತನ ಕಾಲದಲ್ಲಿ ನಾನು ಕಾಪ್ರಿ ನಗರದಲ್ಲಿ ಕಲಿತುಕೊಂಡ "ಟರಾಂಟೆಲ್ಲಾ" ಎಂಬ ನರ್ತನವನ್ನು ಮಾಡಬೇಕೆಂದು ತೋರ್ವಾಲ್ಡನು ಹೇಳುತ್ತಿದಾನೆ.

ಲಿಂಡ್ :—ತಿಳಿಯಿತು. ನಿನ್ನ ಪೂರ್ವಸ್ಥಿತಿಯನ್ನೇ ಕೈಕೊಳ್ಳುತ್ತೀಯೆ.

ನೋರಾ :—ಹಾಗೆ ಮಾಡಬೇಕೆಂದು ತೊರ್ವಾಲ್ಡನ ಇಚ್ಛೆ. ಇಗೋ ನೋಡು. ಉಡಿಗೆತೊಡಿಗೆಗಳೆಲ್ಲಾ ಈ ಪೆಟ್ಟಿಗೆಯಲ್ಲಿವೆ. ಕಾಪ್ರಿಯಲ್ಲಿದ್ದಾಗ್ಗೆ ತೊರ್ವಾಲ್ಡನು ಇವುಗಳನ್ನು ಮಾಡಿಸಿ

ಕೊಟ್ಟಿದ್ದನು. ಕೆಲವು ಭಾಗಗಳೆಲ್ಲಾ ಹರಿದುಹೋಗಿವೆ. ನಾನೇನು ಮಾಡಲೋ ಗೊತ್ತೇ ಆಗುವುದಿಲ್ಲ.—

ಲಿಂಡ್ :—ಅದೇನಂತೆ ಬೇಗ ಸರಿಮಾಡಬಹುದು. ಕೆಲವು ಕಡೆ. ಅಂಚು ಕಳಚಿ ಬಿದ್ದುಹೋಗಿದೆ. ಸೂಜಿ-ದಾರ ? ಇಷ್ಟುಸಾಕು.

ನೋರಾ :—ಸಮಯಕ್ಕೆ ಆಗುವಳು ನೀನು ತಾನೆ ಕ್ರಿಸ್ಟೀನ್ ನಿನ್ನಂತಹ ಸಂಗಾತಿಯೇ ಇಲ್ಲ!

ಲಿಂಡ್:—(ಹೊಲಿಗೆ ಹಾಕುತ್ತಾ) ನಾಳೆ ಹಾಗಾದರೆ ಶೃಂಗಾರಮೂರ್ತಿಯಾಗುತ್ತೀಯೇ. ನಾಳೆ ನೀನು ಹೊರಡುವುದಕ್ಕೆ ಸ್ವಲ್ಪ ಮುಂಚೆ ಬಂದು ನಿನ್ನ ಸಿಂಗರವೆಲ್ಲ ಸರಿಯಾಗಿದೆಯೋ ಇಲ್ಲವೋ ನೋಡುತ್ತೇನೆ. ಅದು ಹಾಗಿರಲಿ. ನಿನ್ನೆ ರಾತ್ರಿ ಹಬ್ಬದ ಊಟಕ್ಕೆ ನೀನು ನನ್ನನ್ನು ಕರೆದದ್ದು ನನಗೆ ಎಷ್ಟು ಸಂತೋಷವಾಯಿತೋ-ನಾನು ನಿನಗೆ ಹೇಳಲೇ ಇಲ್ಲ.

ನೋರಾ :—(ಎದ್ದು-ಎದರು ಕಡೆ ನಡೆದುಕೊಂಡು ಹೋಗಿ) ನಿನ್ನೆ ರಾತ್ರಿ ಎಂದಿನಂತೆ ಅಷ್ಟು ಚೆನ್ನಾಗಿರಲಿಲ್ಲ ಕ್ರಿಸ್ಟೀನ್. ನೀನು ಈ ಊರಿಗೆ ಇನ್ನೂ ಕೆಲವು ದಿನ ಮುಂಚಿತವಾಗಿ ಬರಬೇಕಾಗಿತ್ತು. ತೊರ್ವಾಲ್ಡನಿಗೆ ಮನೆಯನ್ನು ಅಲಂಕಾರಮಾಡಿ ನಾಜೋಕಾಗಿ ಇಟ್ಟುಕೊಂಡಿರುವುದಕ್ಕೆ ಚೆನ್ನಾಗಿ ಗೊತ್ತು.

ಲಿಂಡ್ :—ನಿನಗೆ ಮಾತ್ರ ಗೊತ್ತಿಲ್ಲವೇನೋ! **ನೀನು ಆ ಅಪ್ಪನ ಮಗಳಲ್ಲವೆ?** ಅದು ಹಾಗಿರಲಿ. ನಿನ್ನೆ ರಾತ್ರಿ ಡಾಕ್ಟರ್ ರ್‍ಯಾಂಕ್ ಮನಸ್ಸಿನಲ್ಲಿ ಏನೋ ವಿಷಾದಪಡುತ್ತಿದ್ದವನ ಹಾಗೆ ತೋರಿದ. ಅವನು ಯಾವಾಗಲೂ ಹಾಗೆಯೇ ?

ನೋರಾ :—ಹಾಗಲ್ಲ. ನಿನ್ನೆ ಎಲ್ಲರಿಗೂ ಕಾಣುವ ಹಾಗಿತ್ತು. ಅವನು ಒಂದು ಅಪಾಯಕರವಾದ ರೋಗದಿಂದ ನರಳುತ್ತಿದಾನೆ. ಅವನ ಬೆನ್ನಿನ ಮೂಳೆಯಲ್ಲಿ ಕ್ಷಯರೋಗ ಪ್ರಾರಂಭವಾಗಿದೆ. ಅವನ ತಂದೆಯ ಅತ್ಯಾಚಾರಗಳಿಂದ, ಹುಟ್ಟಿದಾಗಿನಿಂದಲೂ ಅವನು ನರಳುತ್ತಲೇ ಇದ್ದಾನೆ—ಈಗ ತಿಳಿಯಿತೆ ?

ಲಿಂಡ್ :—(ಹೊಲಿಗೆಯನ್ನು ಬಿಟ್ಟು) ಆದರೆ-ನೋರಾ ಇಂಥಾ ವಿಷಯಗಳೆಲ್ಲ ನಿನಗೆ ಹೇಗೆ ತಿಳಿಯಿತು ?

ನೋರಾ :—(ಶಥಪಥ ಸುತ್ತುತ್ತಾ) ಫೂ ! ನಾನು ಮೂರು ಮಕ್ಕಳ ತಾಯಿ. ವೈದ್ಯದ ವಿಷಯಗಳನ್ನು ತಿಳಿದಿರುವ ಮದುವೆಯಾದ ಹೆಂಗಸರು ಬಂದು ಹೋಗಿ ಮಾಡಿಕೊಂಡಿರುವಾಗ್ಗೆ ಇಂಥಾ ವಿಷಯಗಳು ಬರುವುದೇನಾಶ್ಚರ್ಯ ?

ಲಿಂಡ್ :—(ಹೊಲಿಯುತ್ತಾ ಸ್ವಲ್ಪ ಹೊತ್ತಾದ ಮೇಲೆ) ಡಾಕ್ಟರ್ ರ್‍ಯಾಂಕ್ ನಿತ್ಯವೂ ನಿಮ್ಮ ಮನೆಗೆ ಬರುತ್ತಾನೆಯೇ ?

ನೋರಾ :—ಪ್ರತಿದಿನವೂ ತಪ್ಪದೆ ಬರುತ್ತಾನೆ. ತೊರ್ವಾಲ್ಡಿನ ಪ್ರಾಣಸ್ನೇಹಿತ· ನನ್ನ ಸ್ನೇಹಿತನೂ ಹೌದು. ಮನೆಯವನಂತೆಯೇ ಇದ್ದಾನೆ.

ಲಿಂಡ್ :—ಹಾಗಾದರೆ ಹೇಳು ಮತ್ತೆ—ಅವನು ನಿಷ್ಕಪಟಿಯೇ ? ಅಂದರೆ ಮನಸ್ಸಿನಲ್ಲಿ ಏನೋ ಒಂದು ಊಹೆಯನ್ನಿಟ್ಟು ಕೊಂಡು ತಮ್ಮ ನಯನಡತೆಗಳಿಂದ ಮನಸ್ಸನ್ನು ಎಳೆಯ ತಕ್ಕಂಥ ಮನುಷ್ಯರು ಇದ್ದಾರಲ್ಲ ! ಅಂಥವನೆ ಡಾಕ್ಟರ್ ರ್‍ಯಾಂಕ್ ?

ನೋರಾ:—ಎಂದಿಗೂ ಇಲ್ಲ. ಆ ಯೋಚನೆ ಯಾಕೆ ಬಂತು ನಿನಗೆ ?

ಲಿಂಡ್:—ನಿನ್ನೆ ನಮ್ಮಿಬ್ಬರಿಗೂ ಗುರುತು ಮಾಡಿಸಿದಾಗ್ಗೆ ನನ್ನ ಹೆಸರನ್ನು ಈ ಮನೆಯಲ್ಲಿ ಅನೇಕಾವರ್ತಿ ಕೇಳಿದ್ದೇನೆಂದು ಡಾಕ್ಟರ್ ರ್‍ಯಾಂಕ್ ಹೇಳಿದ ; ಆ ಮೇಲೆ ನಾನು ಯಾರೋ ನಿನ್ನ ಗಂಡನಿಗೆ ಸ್ವಲ್ಪವೂ ಗುರುತಿರಲಿಲ್ಲ. ಆದ್ದರಿಂದ ಡಾಕ್ಟರ್ ರ್‍ಯಾಂಕೆಗೆ ಹೇಗೆ ನಾನು ಯಾರೆನ್ನುವುದು—?

ನೋರಾ:—ನೀನು ಹೇಳುವುದು ಸರಿ ಕ್ರಿಸ್ಟೀನ್, ತೊರ್ವಾಲ್ಡನಿಗೆ ನನ್ನ ಮೇಲಿನ ಪ್ರೀತಿ ಎಷ್ಟಿದೆಯೆಂದರೆ ನಾನು ಅವನೊಡನೆ ಇರುವಾಗ್ಗೆ ಎಷ್ಟು ಪ್ರಿಯವಾಗಿದ್ದರೂ ಮತ್ತೊಬ್ಬರ ಹೆಸರನ್ನೂ ಹೇಳಕೂಡದು. ಪ್ರಪಂಚದಲ್ಲಿ ಅವನಿಗೆ ನಾನೊ

ಬ್ಬಳಿ! ಆದ್ದರಿಂದ ಡಾಕ್ಟರ್ ಜೊತೆಯಲ್ಲಿರುವಾಗ್ಗೆ ಮತ್ತೊಬ್ಬರ ಪ್ರಸಂಗವನ್ನೇ ಎತ್ತುವುದಿಲ್ಲ. ಡಾಕ್ಟರ್ ರ್‍ಯಾಂಕಿನ ಸಂಗಡ ಮಾತನಾಡುವಾಗ್ಗೆ ಈ ಪ್ರಸ್ತಾಪಗಳೆಲ್ಲಾ ಬರುವುದುಂಟು ಮತ್ತು ಇವುಗಳನ್ನೆಲ್ಲಾ ಕೇಳಬೇಕೆಂದು ಅವನಿಗೂ ಆಸೆ.

ಲಿಂಡ್ :—ನನ್ನ ಮಾತು ಕೇಳು ನೋರಾ. ಕೆಲವು ವಿಷಯಗಳಲ್ಲಿ ನೀನು ಇನ್ನೂ ತಿಳುವಳಿಕೆಯಿಲ್ಲದ ಶುದ್ಧ ಹುಡುಗಿ. ನಿನಗಿಂತಲೂ ನಾನು ಎಷ್ಟೋ ದೊಡ್ಡವಳು. ಮತ್ತು ನಿನಗಿಂತಲೂ ನನಗೆ ಅನುಭವ ಹೆಚ್ಚು. ನನ್ನ ಬುದ್ಧಿವಾದದ ಮಾತು ಕೇಳು. ಡಾಕ್ಟರ್ ರ್‍ಯಾಂಕಿನ ಹತ್ತಿರ ಇದನ್ನು ನೀನು ಕೊನೆಗಾಣಿಸಬೇಕು.

ನೋರಾ :—ಯಾವುದನ್ನು ಕೊನೆಗಾಣಿಸಬೇಕು ?

ಲಿಂಡ್ :—ಎರಡು ವಿಷಯ, ಅಂತ ಕಾಣುತ್ತೆ. ನಿನ್ನೆ ನೀನು ಏನು ಹರಟುತ್ತಿದ್ದೆಯಲ್ಲ? ನಿನ್ನ ರೂಪವನ್ನು ಮೋಹಿಸಿ ನಿನಗೆ ಹಣವನ್ನು ಬಿಡತಕ್ಕ ಐಶ್ವರ್ಯವಂತನೊಬ್ಬ........

ನೋರಾ:—ನನ್ನ ದುರದೃಷ್ಟದಿಂದ ನನ್ನನ್ನು ಹಾಗೆ ಮೋಹಿಸತಕ್ಕವನು ಯಾವನೂ ಇರುವುದಿಲ್ಲ. ಆಯಿತು, ನೀನು ಏನು ಹೇಳುವುದು ?

ಲಿಂಡ್ :—ಡಾಕ್ಟರ್ ರ್‍ಯಾಂಕ್ ಐಶ್ವರ್ಯವಂತನೆ ?

ನೋರಾ :—ಹೌದು.

ಲಿಂಡ್ :—ಅವನಿಗೆ ಇನ್ನೂ ಯಾರಾದರೂ ವಾರಸುದಾರರುಂಟೆ

ನೋರಾ :—ಇಲ್ಲ ; ಯಾರೂ ಇಲ್ಲ. ಆದರೆ—

ಲಿಂಡ್ :—ಅವನು ಪ್ರತಿದಿನವೂ ಇಲ್ಲಿಗೆ ಬರುತ್ತಾನಲ್ಲವೆ ?

ನೋರಾ :—ಹೌದು ನಾನು ಆಗಲೇ ಹೇಳಿದೆನಲ್ಲ !

ಲಿಂಡ್ :—ಮರ್ಯಾದಸ್ಥನಿಗೆ ಬುದ್ಧಿ ಎಲ್ಲಿ ಹೋಯಿತು ?

ನೋರಾ :—ನಿನ್ನ ಮಾತುಗಳು ನನಗೆ ಅರ್ಥವೇ ಆಗುವುದಿಲ್ಲ.

ಲಿಂಡ್ :—ಸುಮ್ಮನೆ ಮಾತು ತಿರುಗಿಸಿ ನಟಿಸಬೇಡಮ್ಮ, ನೋರಾ. ನಿನಗೆ ಯಾರು ಇನ್ನೂರು ಐವತ್ತು ಪೌಂಡುಗಳನ್ನು ಸಾಲ ಕೊಟ್ಟನೋ ಊಹಿಸುವುದಕ್ಕಾಗುವುದಿಲ್ಲವೆ ?

ನೋರಾ :—ನಿನಗೇನಾದರೂ ಬುದ್ಧಿಗಿದ್ಧಿ ಇದೆಯೋಇಲ್ಲವೊ? ಏನು ಊಹೆಮಾಡಿದೆ! ನಮ್ಮ ಸ್ನೇಹಿತ! ನಿತ್ಯವೂ ಬರುತ್ತಾನೆ! ಅವನಲ್ಲಿ ಸಾಲ ಬೇಡುವಷ್ಟು ನಾವಿನ್ನೂ ಮರ್ಯಾದೆ ಗೆಟ್ಟಿಲ್ಲವಮ್ಮ.

ಲಿಂಡ್ :—ಹಾಗಾದರೆ ಅವನಲ್ಲವೆ ಹಣವನ್ನು ಕೊಟ್ಟದ್ದು ?

ನೋರಾ :—ಅಲ್ಲ. ಎಂದಿಗೂ ಅಲ್ಲ. ನನಗೆ ಅಂಥಾ ಯೋಚನೆಯೇ ಎಂದಿಗೂ ಬರುತ್ತಿರಲಿಲ್ಲ. ಅಲ್ಲದೆ, ಸಾಲ ಕೊಡುವುದಕ್ಕೆ ಆಗ ಅವನಲ್ಲಿ ದುಡ್ಡೂ ಇರಲಿಲ್ಲ. ಅವನಿಗೆ ಆಸ್ತಿ ಬಂದದ್ದು ಬಹಳ ದಿನಗಳಾದ ಮೇಲೆ.

ಲಿಂಡ್ :—ಹಾಗಾದರೆ, ನೀನು ಬದುಕಿದೆ, ಬಿಡು, ನೋರಾ!

ನೋರಾ :—ಡಾಕ್ಟರ್ ರ್‍ಯಾಂಕಿನಿಂದ ಹಣವನ್ನು ಕಡವಾಗಿ ತೆಗೆದು ಕೊಳ್ಳಬೇಕೆಂದು ನನ್ನ ಮನಸ್ಸಿಗೆಂದೂ ಹೊಳೆಯುತ್ತಿರಲಿಲ್ಲ. ಕೇಳಿದ್ದರೇನೋ ಖಂಡಿತವಾಗಿಯೂ ಅವನು—

ಲಿಂಡ್ :—ತಿಳಿಯಿತು, ನೀನು ಕೇಳುತ್ತಿರಲಿಲ್ಲ.

ನೋರಾ :—ಎಂದಿಗೂ ಇಲ್ಲ. ಅಂಥಾ ಸಂದರ್ಭವೇ ಒದಗುತ್ತಿರ ಲಿಲ್ಲ. ಒಂದು ವೇಳೆ ನಾನು ಡಾಕ್ಟರ್ ರ್‍ಯಾಂಕಿಗೆ ವಿಷಯ ವನ್ನೇನಾದರೂ ತಿಳಿಸಿದ್ದರೆ ಖಂಡಿತವಾಗಿಯೂ—

ಲಂಡ್ :—ನಿನ್ನ ಗಂಡನಿಗೆ ಗೊತ್ತಿಲ್ಲದ ಹಾಗೆ?

ನೋರಾ :—ಇದನ್ನು ಕೊನೆಗಾಣಿಸಬೇಕಾದದ್ದು ಮತ್ತೊಬ್ಬ ನೊಡನೆ; ಮತ್ತು ನನ್ನ ಗಂಡನಿಗೆ ತಿಳಿಯದಂತೆ. ಖಂಡಿತ ವಾಗಿಯೂ ಅವನಲ್ಲಿ ಇದನ್ನು ಕೊನೆಗಾಣಿಸಲೇಬೇಕು.

ಲಿಂಡ್ :—ನಾನು ನಿನಗೆ ನಿನ್ನೆಯೇ ಕೊನೆಗಾಣಿಸೆಂದು ಹೇಳ ಲಿಲ್ಲವೆ ? ಆದರೆ—

ನೋರಾ:—(ಶತಪಥ ಸುತ್ತುತ್ತಾ) ಗಂಡಸಾದವನು ಇಂತಹಾ ವಿಷಯಗಳನ್ನು ಹೆಂಗಸಿಗಿಂತಲೂ ಸುಲಭವಾಗಿ ಸರಿಪಡಿಸಬಹುದು—

ಲಿಂಡ್:—ಹೌದು. ಆ ಹೆಂಗಸಿನ ಗಂಡ - - -

ನೋರಾ:—ಹುಚ್ಚು ಮಾತು! (ಸುಮ್ಮನೆ ನಿಂತು) ಸಾಲವನ್ನು ತೀರಿಸಿದರೆ ಪತ್ರ ವಾಪಸ್ಸು ಬರುವುದಲ್ಲವೆ?

ಲಿಂಡ್:—ಬಂದೇ ಬರುತ್ತೆ; ಅದರಲ್ಲೇನು ಸಂದೇಹ?

ನೋರಾ:—ಆ ಪತ್ರವನ್ನು ಹರಿದು ಸಹಸ್ರಲಕ್ಷ ಚೂರುಚೂರು ಮಾಡಿಬಿಡಬಹುದಲ್ಲವೆ?

ಲಿಂಡ್:—(ನೋರಾವನ್ನು ದೃಷ್ಟಿಸಿ ದುರದುರನೆ ನೋಡಿ ಹೊಲಿಗೆ. ಕೆಳಗಿಟ್ಟು ಎದ್ದು ನಿಂತುಕೊಂಡು) ನೋರಾ, ನನ್ನಿಂದ ಏನೋ ಮರೆಮಾಚುತ್ತಿದ್ದೀಯೆ.

ನೋರಾ:—ನಿನ್ನ ಕಣ್ಣಿಗೆ ನಾನು ಹಾಗೆ ಕಾಣುತ್ತಿದ್ದೇನೆಯೆ?

ಲಿಂಡ್:—ನಿನ್ನೆ ಬೆಳಗ್ಗಿನಿಂದೀಚೆಗೆ ನಿನಗೇನೋ ಕಷ್ಟಸಂಭವಿಸಿದೆ. ಅದೇನು ನೋರಾ?

ನೋರಾ:—(ಅವಳ ಹತ್ತಿರ ಸರಿದು) ಕ್ರಿಸ್ಟೀನ್ (ಹಾಗೆಯೇ ಕಿವಿಗೊಟ್ಟು ಕೇಳುತ್ತಾ) ಹುಶ್! ತೊರ್ವಾಲ್ಡ್ ಮನೆಗೆ ಬಂದನು. ಸ್ವಲ್ಪ ಹೊತ್ತು ಮಕ್ಕಳ ಚಿಕ್ಕಮನೆಯಲ್ಲಿರುತ್ತೀಯಾ? ಹೊಲಿಗೆ ಕೆಲಸ ಅವನ ಕಣ್ಣಿಗೆ ಬಿದ್ದರೆ ಆಗುವುದಿಲ್ಲ. ಒಳಗೆ ಹೋಗು ದಾದಿಯು ನಿನಗೆ ಸಹಾಯ ಮಾಡುತ್ತಾಳೆ.

ಲಿಂಡ್:—(ಸಾಮಾನುಗಳನ್ನು ಒಟ್ಟು ಸೇರಿಸಿಕೊಂಡು) ಹಾಗೆಯೇ ಆಗಲಿ-ಆದರೆ ಈ ಗುಟ್ಟಿನವಿಷಯ ನಮ್ಮಿಬ್ಬರೊಳಗೆ ಇತ್ಯರ್ಥವಾಗುವವರೆಗೂ ನಾನು ಮನೆ ಬಿಟ್ಟು ಹೋಗುವುದಿಲ್ಲ. (ಎಡಗಡೆ ಚಿಕ್ಕಮನೆಯೊಳಗೆ ಹೋಗುವಳು. ಹೆಲ್ಮರನು ಒಳಗೆ ಬರುವನು.)

ನೋರಾ :—(ಹೆಲ್ಮರನ ಹತ್ತಿರಹೋಗಿ) ತೊರ್ವಾಲ್ಡ್ ನಿನ್ನನ್ನೇ ಎದುರು ನೋಡುತ್ತಿದ್ದೆ.

ಹೆಲ್ಮರ್ :—ಅದು ಯಾರು ಅದು ? ದರ್ಜಿಯವಳೆ ?

ನೋರಾ :—ಅಲ್ಲ, ಕ್ರಿಸ್ಟೀನ್. ನಾನು ನಾಳೆ ಹಾಕಿಕೊಳ್ಳುವ ಉಡುಪನ್ನು ಸರಿಮಾಡಲು ಬಂದಿದ್ದಾಳೆ. ನಾಳೆ ಎಷ್ಟು ಸೊಗಸಾಗಿ ಕಾಣುವೆನೋ ನೀನೇ ನೋಡುವೆ ?

ಹೆಲ್ಮರ್ :—ಆ ಸೊಗಸಾದ ಯೋಚನೆ ನಾನು ಮಾಡಿದ್ದಲ್ಲವೆ ?

ನೋರಾ :—ಅದಕ್ಕಿಂತ ಬೇರೆ ಉಂಟೆ ! ಆದರೂ ನಿನ್ನ ಇಷ್ಟ ಪ್ರಕಾರವೇ ನಾನು ನಡೆಯುವುದು ಒಳ್ಳೆಯದಲ್ಲವೆ, ಹೇಳು.

ಹೆಲ್ಮರ್ :—ಒಳ್ಳೆಯದೆ ? ನಿನ್ನ ಗಂಡನು ಹೇಳಿದ ಹಾಗೆ ಕೇಳುವುದು ? ಸರಿಯಾಯಿತು ಬಿಡು. ಸರಿಯಾಯಿತು, ದಗಾಬಾಜಿ ! ನೀನೆಂದಿಗೂ ಆ ಅರ್ಥದಿಂದ ಹೇಳಿರಲಾರೆ. ಏನಾದರೂ ಆಗಲಿ ಈಗ ನಿನ್ನನ್ನು ತೊಂದರೆಪಡಿಸುವುದಿಲ್ಲ. ನೀನು ಬಟ್ಟೆಬರೆಗಳನ್ನು ಹಾಕಿಕೊಂಡು ಎಲ್ಲವೂ ಸರಿಯಾಗಿದೆಯೊ ಇಲ್ಲವೋ ನೋಡಬೇಕೆಂದಿರಬೇಕು.

ನೋರಾ :—ನೀನೇನು, ಕೆಲಸಮಾಡಬೇಕೇನೋ ?

ಹೆಲ್ಮರ್ :—ಹೌದು. (ಒಂದು ಕಾಗದದ ಕಟ್ಟನ್ನು ತೋರಿಸಿ) ನೋಡು ಇದನ್ನು. ಬ್ಯಾಂಕಿನಿಂದ ಇದೇ ತಾನೆ ಬಂದೆ. (ತನ್ನ ಚಿಕ್ಕ ಮನೆಗೆ ಹೊರಡುವನು.)

ನೋರಾ :—ತೊರ್ವಾಲ್ಡ್.

ಹೆಲ್ಮರ್ :—ಏನು ?

ನೋರಾ :—ನಿನ್ನ ಪುಟ್ಟ ಅಳಿಲು ಕುಂಚುವು ನಿನ್ನನ್ನೇನಾದರೂ ಕೇಳಿದರೆ–ಅಂದವಾಗಿ–ಚಂದವಾಗಿ– ಬಲುಚಂದವಾಗಿ ಬೇಡಿಕೊಂಡರೆ—

ಹೆಲ್ಮರ್ :—ಏನು, ಅಮೇಲೆ ?

ನೋರಾ :—ಮೇಲಕ್ಕೂ ಕೆಳಕ್ಕೂ ಹಾರಾಡುತ್ತಾ ಎಲ್ಲೆಲ್ಲೂ ಮಧುರ ಗಾನ ಮಾಡುತ್ತಾ ನಿನ್ನ ಪುಟ್ಟಹಕ್ಕಿ ಏನನ್ನಾದರೂ ಬೇಡಿ ಕೊಂಡರೆ—

ಹೆಲ್ಮರ್ :—ಪುಟ್ಟಹಕ್ಕಿ ಏನಾದರೂ ಆಗಲಿ ಹಾಗೆಯೇ ಮಾಡುತ್ತಿರುತ್ತದೆಯಲ್ಲ !

ನೋರಾ :—ದೇವಕನ್ಯೆಯಂತೆ ಬೆಳದಿಂಗಳಲ್ಲಿ ತೊರ್ವಾಲ್ಡ್ ನಿನ್ನ ಮುಂದೆ ನರ್ತನಮಾಡಿ ನಿನ್ನ ಮನೋಲ್ಲಾಸವನ್ನುಂಟುಮಾಡುತ್ತೇನೆ.

ಹೆಲ್ಮರ್ :—ನೋರಾ, ನೀನು ಬೆಳಗ್ಗೆ ಕೇಳಿದ ಮಾತಿನ ವಿಷಯವಲ್ಲವಷ್ಟೆ ?

ನೋರಾ :—(ಅವನ ಹತ್ತಿರ ಹೋಗಿ) ಹೌದು, ತೊರ್ವಾಲ್ಡ್, ಅದೇ ವಿಷಯ ನಿನ್ನನ್ನು ಬೇಡಿಕೊಳ್ಳುತ್ತೇನೆ,—ದಮ್ಮಯ್ಯ—

ಹೆಲ್ಮರ್ :—ಆ ಪ್ರಸ್ತಾಪವನ್ನು ಪುನಃ ಎತ್ತುವುದಕ್ಕೆ ಧೈರ್ಯವುಂಟಿ ನಿನಗೆ ?

ನೋರಾ :—ಹೌದು, ಧೈರ್ಯವಿದೆ ಪ್ರಿಯ. ಈ ವಿಷಯದಲ್ಲಿ ನನ್ನ ಕೋರಿಕೆಯಂತೆ ನೀನು ನಡೆಯಬೇಕು. ಕ್ರಾಗ್‌ಸ್ಟಾಡ್ ಬ್ಯಾಂಕು ಬಿಟ್ಟು ಹೋಗಕೂಡದು.

ಹೆಲ್ಮರ್ :—ಪ್ರಿಯೆ, ನೋರಾ, ಅವನ ಕೆಲಸವನ್ನು ತಾನೆ ನಿನ್ನ ಸ್ನೇಹಿತಳು ಮಿಸೆಸ್ ಲಿಂಡ್‌ಗೆ ಕೊಡಬೇಕೆಂದಿರುವುದು !

ನೋರಾ :—ಹೌದು-ಹೌದು ಅವಳ ವಿಷಯದಲ್ಲೇನೋ ತುಂಬಾ ಕರುಣೆಯನ್ನು ತೋರಿಸಿದ್ದೀಯೆ ; ಆದರೆ ಇನ್ನು ಯಾವನಾದರೂ ಒಬ್ಬ ಗುಮಾಸ್ತನನ್ನು ಕಳುಹಿಸಿಬಿಟ್ಟು ಕ್ರಾಗ್‌ಸ್ಟಾಡ್‌ನನ್ನು ಉಳಿಸಿಕೊಳ್ಳಬೇಕು.

ಹೆಲ್ಮರ್ :—ಇದೇನೋ ನನಗೆ ಅರ್ಥವಾಗದ ಹಟ. ಬುದ್ಧಿಯಿಲ್ಲದೆ ನೀನೇನೋ ಅವನಿಗೊಂದು ಮಾತು ಕೊಟ್ಟಿದ್ದಕ್ಕೋಸ್ಕರ ನಾನು ಹಾಗೆಯೆ ನಡೆಯಬೇಕೆಂದು—

ನೋರಾ:—ಕಾರಣವದಲ್ಲ, ತೊರ್ವಾಲ್ಡ್. ನಿನಗೋಸ್ಕರ, ನಿನ್ನ ಕ್ಷೇಮ ಕ್ಕೋಸ್ಕರ ಹೇಳತಕ್ಕಮಾತು. ಕೆಲಸಕ್ಕೆ ಬಾರದ ವರ್ತ ಮಾನ ಪತ್ರಿಕೆಗಳಲ್ಲೆಲ್ಲಾ ಇವನು ದೂಷಣೆಗಳನ್ನು ಬರೆ ಯುವ ವಾಡಿಕೆಯಿದೆ; ನೀನೇ ನನಗೆ ಈ ವಿಷಯುವನ್ನು ತಿಳಿ ಸಿದ್ದೀಯೆ. ನಾನು ಬಾಯಲ್ಲಿ ಹೇಳಲಾರದಷ್ಟು ಕೆಡಕು ಅವನು ನಮಗೆ ಮಾಡಬಹುದು. ಅವನನ್ನು ಕಂಡರೆ ನನಗೆ ಪ್ರಾಣಭಯವಾಗುತ್ತೆ.

ಹೆಲ್ಮರ್ :—ಆಹಾ! ಈಗ ಗೊತ್ತಾಯಿತು, ಹಿಂದೆ ನಡೆದ ವಿಷಯ ಗಳನ್ನು ಜ್ಞಾಪಿಸಿಕೊಂಡು ನಡುಗುತ್ತೀಯೆಂದು ಕಾಣುತ್ತೆ.

ನೋರಾ :—ನಿನ್ನ ಅರ್ಥವೇನು ?

ಹೆಲ್ಮರ್ :—ಗೊತ್ತಾಗಲಿಲ್ಲವೆ ?. ನಿಮ್ಮ ತಂದೆಯ ವಿಚಾರ ನಿನ್ನ ನೆನಪಿನಲ್ಲಿರ ಬೇಕಲ್ಲವೆ ?

ನೋರಾ :—ಹೌದು—ಹೌದು. ಅದು ಸರಿತಾನೆ. ಹೊಟ್ಟೆಕಿಚ್ಚಿ ನಿಂದ ಈ ಕೀಳು ಮನುಷ್ಯರು ನನ್ನ ತಂದೆಯ ವಿಷಯವಾಗಿ ವರ್ತಮಾನ ಪತ್ರಿಕೆಗಳಲ್ಲಿ ಬರೆದುದನ್ನೆಲ್ಲಾ ನೀನೇ ಜ್ಞಾಪಿ ಸಿಕೋ! ಏನೇನೋ ಅಪವಾದಗಳನ್ನು ನಮ್ಮಪ್ಪನಮೇಲೆ ಹೊರಿಸಿದರು! ಎಲ್ಲಾ ವಿಚಾರಗಳನ್ನೂ ಮೊಖ್ತಾ ನೋಡಿ ಕೇಳಿ ವಿಚಾರಣೆಮಾಡಿ ವ್ಯವಸ್ಥೆಮಾಡುವುದಕ್ಕೆ ನಿನ್ನನ್ನು ಕಳುಹಿಸಿಕೊಡದೇ ಇದ್ದಿದ್ದರೆ ನನ್ನ ತಂದೆಯನ್ನು ಇಲಾಖೆ ಯಿಂದ ಕಳುಹಿಸಿ ಬಿಡುತ್ತಿದ್ದರು. ನೀನು ಕರುಣೆಯಿಂದ ಅವನಿಗೆ ಸಹಾಯ ಮಾಡಲು ಮನಸ್ಸು ಮಾಡದಿದ್ದರೆ ಏನಾಗುತ್ತಿತ್ತೊ ?

ಹೆಲ್ಮರ್ :—ನನಗೂ, ನಿಮ್ಮ ತಂದೆಗೂ ಒಂದು ಭೇದ. ನಿನ್ನ ತಂದೆಯ ಅಧಿಕಾರದ ಕೀರ್ತಿ ಸಂಶಯರಹಿತವಾಗಿರಲಿಲ್ಲ; ನನ್ನದಾದರೋ ಈಗ—ದೇವರ ದಯೆಯಿಂದ ಮುಂದೆ ಕೂಡ—ಸಂಶಯರಹಿತವಾಗಿರುವುದು.

ನೋರಾ:—ಈ ಕೀಳು ಮನುಷ್ಯರು ಯಾವಾಗ ಏನು ಕೆಡಕು ಮಾಡು ತ್ತಾರೋ ಹೇಳುವುದು ಕಷ್ಟ. ನೆಮ್ಮದಿಯಾಗಿ ಸುಖವಾಗಿ ಸಂತೋಷದಿಂದ ನಾವು ಮತ್ತು ನಮ್ಮ ಮಕ್ಕಳು ನಮ್ಮ ಈ ಮನೆಯಲ್ಲಿರಬೇಕೆಂಬುದೊಂದೇ ನನ್ನ ಆಶೆ. ತೊರ್ವಾಲ್ಡ್, ಅದಕ್ಕೋಸ್ಕರಲೇ ನಿನ್ನನ್ನು ಬೇಡುವುದು—

ಹೆಲ್ಮರ್:—ನಿನ್ನ ಬೇಡಿಕೆ ಹೆಚ್ಚಿದಷ್ಟೂ ಅವನನ್ನು ಇಟ್ಟುಕೊಳ್ಳು ವುದು ನನಗೆ ಅಸಾಧ್ಯವಾಗುತ್ತಿರುವುದು. ಅವನನ್ನು ಕಳು ಹಿಸಿಬಿಡುತ್ತೇನೆಂದು ಬ್ಯಾಂಕಿನಲ್ಲಿ ಎಲ್ಲರಿಗೂ ಆಗಲೇ ತಿಳಿದು ಬಿಟ್ಟಿದೆ. ಬ್ಯಾಂಕಿನ ಮುಖ್ಯಾಧಿಕಾರಿ ಅವನ ಹೆಂಡತಿಯ ಆಜ್ಞೆಯಂತೆ ಮನಸ್ಸನ್ನು ಬದಲಾಯಿಸಿದನೆಂದು ಹರಡಿಕೊ ಳ್ಳಬೇಕೋ?

ನೋರಾ:—ಹಾಗೆ ಹರಡಿದರೇನು ಪ್ರಮಾದ?

ಹೆಲ್ಮರ್:—ಸರಿತಾನೆ—ಈ ಮೊಂಡ ಹುಡುಗಿಗೆ ತನ್ನ ಹಟ ಸಾಗಿ ಬಿಟ್ಟರೆ ಸಾಕು; ಯಾವದು ಏನಾದರೆ ತಾನೆ ಏನು? ನನ್ನ ಕೈಕೆಳಗಿನವರ ಅಪಹಾಸ್ಯಕ್ಕೆ ಗುರಿಯಾಗುತ್ತೇನೆಂದಿದ್ದೀಯಾ? ಹೊರಗಿನವರ ಮಾತಿಗೆ ಕಿವಿಕೊಡುತ್ತೇನೆಂದು? ಹಾಗೇನಾ ದರೂ ಆದರೆ ಅದರ ಫಲಿತಾಂಶ ಶೀಘ್ರದಲ್ಲಿಯೇ ಗೊತ್ತಾಗಿ ಬಿಡುವುದು. ಅದಲ್ಲದೆ ನಾನು ಬ್ಯಾಂಕಿನಲ್ಲಿ ಮುಖ್ಯಾಧಿಕಾರಿ ಯಾಗಿರುವ ತನಕ ಕ್ರಾಗ್‌ಸ್ಟಾಡನನ್ನು ಇಟ್ಟುಕೊಳ್ಳದಿರುವು ದಕ್ಕೆ ಮತ್ತೊಂದು ಕಾರಣವಿದೆ.

ನೋರಾ:—ಅದೇನದು?

ಹೆಲ್ಮರ್:—ಅವನ ಶೀಲಸ್ವಭಾವಗಳಲ್ಲಿರುವ ನ್ಯೂನತೆಗಳನ್ನೂ ಒಂದು ವೇಳೆ ಲೆಕ್ಕಿಸದೆ ಇರಬಹುದು.—

ನೋರಾ:—ಹೌದು ನೀನು ಮಾಡಬಲ್ಲೆ-ಹಾಗೆ ಮಾಡು, ಮಾಡು.

ಹೆಲ್ಮರ್:—ಇದೂ ಅಲ್ಲದೆ ಅವನು ಮೈಬಗ್ಗಿ ಕೆಲಸಮಾಡುವನು ಎಂದೂ ಕೂಡ ಕೇಳಿದ್ದೇನೆ. ಆದರೆ ಚಿಕ್ಕಂದಿನಿಂದಲೂ ಅವ

ನಿಗೂ ನನಗೂ ಸ್ನೇಹ. ಬುದ್ಧಿಯಿಲ್ಲದೆ ಚಿಕ್ಕಂದಿನಲ್ಲಿ ಸ್ನೇಹ ಮಾಡಿಕೊಂಡು, ನಾವು ಬೆಳದು ದೊಡ್ಡವರಾದಮೇಲೆ ಪೇಚಾಟಕ್ಕೆ ಸಿಕ್ಕಿಕೊಳ್ಳುವ ಸ್ನೇಹ. ಮುಚ್ಚುಮರೆ ಇಲ್ಲದೆ ಹೇಳುತ್ತೇನೆ ಕೇಳು. ನಾವಿಬ್ಬರೂ ಬಾಲ್ಯದಲ್ಲಿ ಅತ್ಯಂತ ಆಪ್ತ ಸ್ನೇಹಿತರಾಗಿದ್ದೆವು. ಆದರೆ ಈ ಅವಿವೇಕಿ ಔಚಿತ್ಯವನ್ನರಿಯದೆ ಎಲ್ಲರ ಎದುರಿಗೂ ಅಂಕೆತಪ್ಪಿ ನಡೆಯುತ್ತಾನೆ. ಆ ಸಮಯಗಳಲ್ಲಿ ನನ್ನ ಸಂಗಡ ಅತಿ ಸಲಿಗೆಯಿಂದ ಮಾತನಾಡುವುದಕ್ಕೆ ಹಕ್ಕಿದೆಯೆಂದು ತಿಳಿದು ಪ್ರವರ್ತಿಸುತ್ತಾನೆ. ನಿಮಿಷ ನಿಮಿಷಕ್ಕೂ ಪೊಂದಾವರ್ತಿ "ಲೋ-ಹೆಲ್ಮರ್, ಇಲ್ಲಿ ನೋಡೋ ಇಲ್ಲಿ—" ಇತ್ಯಾದಿಯಾಗಿ ಬಾಯಿ ತಡೆಯದೇ ಹರಟುತ್ತಾನೆ. ಆ ನಡವಳಿಕೆ ನನಗೆ ಸ್ವಲ್ಪವೂ ಸೈರಿಸುವುದಿಲ್ಲ. ಬ್ಯಾಂಕಿನಲ್ಲಿ ಅವನಿದ್ದರೆ ನನ್ನ ಅವಸ್ಥೆ ಸೈರಿಸಲಶಕ್ಯವಾಗುವುದು.

ನೋರಾ :—ತೊರ್ವಾಲ್ಡ್, ಅದು ನಿಜವಾಗಿಯೂ ನಿನ್ನ ಅಭಿಪ್ರಾಯವೆಂದು ನಂಬಲಾರೆ.

ಹೆಲ್ಮರ್ :—ನಂಬಲಾರೆಯ ! ಯಾಕೆ ?

ನೋರಾ :—ನೀನು ಹೇಳುವುದೆಲ್ಲ ಸಣ್ಣಮನಸ್ಸಿನವರ--?

ಹೆಲ್ಮರ್ :—ಏನು ಹೇಳಿದೆ ? ಸಣ್ಣಮನಸ್ಸೆ ? ನಾನು ಸಣ್ಣಮನಸ್ಸಿನವನೆ ?

ನೋರಾ :—ಅಲ್ಲ ತೊರ್ವಾಲ್ಡ್, ನಿನ್ನದು ಸಣ್ಣಮನಸ್ಸಲ್ಲ. ಅದಕ್ಕೋಸ್ಕರವಾಗಿಯೇ ನಾನು ಹೇಳಿದ್ದು.

ಹೆಲ್ಮರ್ :—ಹಾಗಂದರೇನು ? ಹೀಗಂದರೆ ಏನು ? ಎಲ್ಲಾ ಒಂದೆ ಅಲ್ಲವೆ. ನನ್ನದು ಸಣ್ಣಮನಸ್ಸಿನವರ ಮಾತು ಎಂದು ಹೇಳುತ್ತೀಯೆ, ಆದ್ದರಿಂದ ನಾನು ಹಾಗೆಯೇ ಇರಬೇಕು. ಸಣ್ಣಮನಸ್ಸಂತೆ—ಸಣ್ಣಮನಸ್ಸು—? ಆಗಲಿ ಹಾಗಾದರೆ ಈ ವಿಷಯವನ್ನು ಕೊನೆಗಾಣಿಸಬೇಕು ಸಾವಕಾಶ ಮಾಡುವುದು ತಪ್ಪು. (ಹಜಾರದ ಬಾಗಿಲಕಡೆ ಹೋಗಿ ಕೂಗುತ್ತಾ) ಹೆಲೀ!

ಹೆಲ್ಮರ್ :—(ಕಾಗದದ ಕಟ್ಟಿನಲ್ಲಿ ಹುಡುಕುತ್ತಾ) ಇತ್ಯರ್ಥ ಮಾಡಲೇ ಬೇಕು. (ಸೇವಕಳು ಬರುವಳು) ಇಗೋ ನೋಡು ಈ ಕಾಗದ ವನ್ನು ತೆಗೆದುಕೊಂಡು ಜಾಗ್ರತೆಯಾಗಿ ಕೆಳಕ್ಕೆ ಹೋಗು. ಯಾವನಾದರೂ ಓಲೇಕಾರನನ್ನು ಹುಡುಕಿ ಈ ಕಾಗದವನ್ನು ಸಾವಕಾಶಮಾಡದೆ ತಲಪಿಸಬೇಕೆಂದು ಹೇಳು. ಇಗೋ ದುಡ್ಡು. ಕಾಗದದ ಮೇಲೆ ವಿಳಾಸ ಬರೆದಿದೆ.

ಸೇವಕಳು :—ಹಾಗೆಯೇ ಆಗಲಿ, ಸ್ವಾಮಿ. (ಕಾಗದವನ್ನು ತೆಗೆದು ಕೊಂಡು ಹೋಗುವಳು)

ಹೆಲ್ಮರ್ :—(ಕಾಗದಗಳನ್ನು ಸರಿಪಡಿಸುತ್ತಾ) ಈಗ ಏನನ್ನುತ್ತೀ ನನ್ನ ಮೊಂಡ ಹುಡುಗಿ?

ನೋರಾ :—(ಉಸಿರು ಹಿಡಿದುಕೊಂಡು) ತೊರ್ವಾಲ್ಡ್, ಆ ಕಾಗದ ಯಾವದು?

ಹೆಲ್ಮರ್:—ಕ್ರಾಗ್‌ಸ್ಟಾಡನ್ನು ಮನೆಗೆ ಕಳುಹಿಸುವ ಕಾಗದ.

ನೋರಾ :—ತೊರ್ವಾಲ್ಡ್ ವಾಪಸ್ಸು ತೆಗೆದುಕೋ. ದಯವಿಟ್ಟು ಆ ಕಾಗದವನ್ನು ಕಳುಹಿಸಬೇಡ. ಇನ್ನೂ ಕೈಮಿಂಚಿ ಹೋಗಿಲ್ಲ. ತೊರ್ವಾಲ್ಡ್ ಕರಿ-ಹೆರ್ಲನನ್ನು ವಾಪಸ್ಸು ಕರಿ. ನನಗೋಸ್ಕರ ಮಾಡು. ನಿನಗೋಸ್ಕರಮಾಡು! ನಮ್ಮಿಬ್ಬರ ಮಕ್ಕಳಿಗೋ ಸ್ಕರ ನನ್ನ ಮಾತು ನಡೆಸಿಕೊಡು. ಅವಳನ್ನು ವಾಪಸ್ಸು ಕರಿ. ಆ ಕಾಗದದಿಂದ ಆಗುವ ಕೆಡಕೆಲ್ಲಾ ನಿನಗೆ ಸಂಪೂರ್ಣ ವಾಗಿ ಗೊತ್ತಿಲ್ಲ.

ಹೆಲ್ಮರ್ :—ಮೀರಿಹೋಯಿತು.

ನೋರಾ :—ಹೋಯಿತು, ಮೀರಿ ಹೋಯಿತು!

ಹೆಲ್ಮರ್ :—ನೋರಾ, ಈ ವಿಷಯದಲ್ಲಿ ನಿನ್ನ ವರ್ತನೆ ನನಗೆ ಅಪ ಮಾನಕರವಾದರೂ ನಿನ್ನ ಕಾತರವನ್ನು ಮನ್ನಿಸುತ್ತೇನೆ. ಹೌದು ನಿಜವಾಗಿಯೂ ಅಪಮಾನಕರ. ಹೊಟ್ಟೆಗಿಲ್ಲದ ಕೇವಲ ಒಬ್ಬ ಗುಮಾಸ್ತನ ಸೇಡಿಗೆ ಬೆದರಿಕೊಂಡು ನಾನು

ನಡೆಯಬೇಕೆಂಬುದು ನನಗೆ ಅಪಮಾನವಲ್ಲವೆ? ಈ ವಿಷಯವೂ ಕೂಡ ನನ್ನ ಮೇಲಿಟ್ಟಿರುವ ನಿನ್ನ ಪ್ರೀತಿಯನ್ನು ತೋರಿಸುವುದರಿಂದ ನಿನ್ನನ್ನು ಸಂಪೂರ್ಣವಾಗಿ ಮನ್ನಿಸಿದ್ದೇನೆ. (ಅವಳನ್ನು ತಬ್ಬಿಕೊಂಡು) ಹಾಗಲ್ಲವೇ ಇರಬೇಕಾದ್ದು ನೋರಾ, ನನ್ನ ಪ್ರಿಯೆ! ಏನು ಬೇಕಾದರೂ ಬರಲಿ, ನನ್ನ ಧೈರ್ಯಶೌರ್ಯಗಳನ್ನೆಂದಿಗೂ ಬಿಡುವುದಿಲ್ಲ. ಯಾವ ಕಷ್ಟಬಂದರೂ ಗಂಡಸಾದ ನಾನು ನಿರ್ವಹಿಸಿಕೊಳ್ಳುತ್ತೇನೆ.

ನೋರಾ:—(ಭಯಪಟ್ಟು ಆರ್ತಧ್ವನಿಯಿಂದ) ಅದಕ್ಕೇನರ್ಥ?

ಹೆಲ್ಮರ್:—ಅರ್ಥವೇ? ಯಾವ ಕಷ್ಟಬಂದರೂ ನಾನು ನೋಡಿಕೊಳ್ಳುತ್ತೇನೆ.

ನೋರಾ:—(ಧೈರ್ಯವನ್ನು ತಾಳಿ) ಹಾಗೆಂದಿಗೂ ನೀನು ಮಾಡಬೇಕಾದ್ದಿಲ್ಲ.

ಹೆಲ್ಮರ್:—ಅದೂ ಒಳ್ಳೆಯದು. ಏನಾದರೂ ಕಷ್ಟಬಂದಲ್ಲಿ ಗಂಡಹೆಂಡತಿಯರಿಬ್ಬರೂ ಸಮಭಾಗಿಗಳಾಗಿ ಅನುಭವಿಸೋಣ. ಹಾಗೆ ಇದ್ದುಕೊಳ್ಳೋಣ. (ತಲೆ ಸವರಿ ಮುತ್ತುಕೊಡುತ್ತಾ) ಈಗ ಸಮಾಧಾನವಾಯಿತೋ? ಸರಿ-ಸರಿ ಇದೇನಿದು ಅಂಜಿದ ಪಾರಿವಾಳಗಳ ಹಾಗೆ ನೋಡುತ್ತೀಯೆ? ಪ್ರತಿಯೊಂದೂ ನಿನ್ನ ಸ್ವಕಪೋಲಕಲ್ಪಿತವಾದ ಗೊಗ್ಗಯ್ಯಗಳು! ಇನ್ನು ನೀನು ಒಳಗೆ ಹೋಗಿ ಕಂಜೀರವನ್ನು ಕೈಯಲ್ಲಿ ಹಿಡಿದು ಟರ್ರಾಟೆಲ್ಲಾ ನರ್ತನವನ್ನು ಅಭ್ಯಾಸಮಾಡು. ನಾನು ಒಳಗೆ ಹೋಗಿ ಬಾಗಿಲು ಹಾಕಿಕೊಳ್ಳುತ್ತೇನೆ. ನನ್ನ ಕಿವಿಗೆ ಏನೂ ಹಾಕಿಕೊಳ್ಳುವುದಿಲ್ಲ. ನೀನು ಗಲಾಟೆಯನ್ನೆಷ್ಟು ಬೇಕಾದರೂ ಮಾಡಬಹುದು. (ಬಾಗಿಲ ಹತ್ತಿರ ಹಿಂತಿರುಗಿನೋಡಿ) ಡಾಕ್ಟರ್ ರ್‍ಯಾಂಕ್ ಬಂದರೆ ನಾನಿಲ್ಲಿದ್ದೇನೆಂದು ಅವನಿಗೆ ತಿಳಿಸು. (ಅವಳ ಕಡೆ ತಲೆಯಲ್ಲಾಡಿಸಿ, ಕಾಗದಗಳನ್ನು ಜೋಡಿಸಿಕೊಂಡು ತನ್ನ ಚಿಕ್ಕಮನೆಯೊಳಕ್ಕೆ ಹೋಗಿ ಬಾಗಿಲು ಹಾಕಿಕೊಳ್ಳುವನು)

ನೋರಾ :—(ಕಳವಳಪಡುತ್ತಾ ಸ್ಥಂಭೀಭೂತಳಾಗಿ ನಿಂತ ಕಡೆಯಲ್ಲಿ ನಿಂತು ಪಿಸಪಿಸಗುಟ್ಟುತ್ತಾ) ಅವನೇನೋ ಹಾಗೆಯೇ ಮಾಡ ಬಲ್ಲ. ಮಾಡಿಯೂ ಮಾಡಿ ಬಿಡುವನು! ಯಾವದು ಏನಾ ಗಲಿ ಅವನು ಮಾಡಿಬಿಡುವನು—ಬೇಡ!—ಕೂಡದು!! ಹಾಗಾಗಬಾರದು!!! ಎಂದಿಗೂ ಕೂಡದು!! ಅದೊಂದು ವಿನಾ ಇನ್ನೇನು ಬೇಕಾದರೂ ಆಗಬಹುದು. ಅಯ್ಯೋ ನನಗೆ ಯಾರು ಸಹಾಯಕರು? ಯಾರನ್ನು ಕೇಳಲಿ? ಎಲ್ಲಿ ಹೋಗಲಿ? ಏನು ಮಾಡಲಿ? (ಬಾಗಿಲಿನ ಘಂಟೆ ಶಬ್ದ ಕೇಳಿಸು ವುದು) ಡಾಕ್ಟರ್ ರ್‍ಯಾಂಕ್! ಅದೊಂದು ವಿನಹಾ ಇನ್ನೇ ನಾದರೂ ಆಗಲಿ! ಅದು ಒಂದು ವಿನಹಾ ಏನು ಬೇಕಾದರೂ, ಏನು ಬೇಕಾದರೂ ಆಗಲಿ! (ಕೈಯಿಂದ ಮುಖವನ್ನು ಮುಚ್ಚಿ ಕೊಂಡು ಹಾಗೆಯೇ ಸ್ವಲ್ಪ ಸೈರಿಸಿಕೊಂಡು ಧೈರ್ಯದಿಂದ ಬಾಗಿ ಲಕಡೆ ಹೋಗಿ ಕದವನ್ನು ತೆಗೆಯುವಳು. ಡಾಕ್ಟರ್ ರ್‍ಯಾಂಕ್ ಬಾಗಿ ಲಹತ್ತಿರ ನಿಂತು ಟೋಪಿ ಮತ್ತು ಮೇಲಂಗಿಯನ್ನು ತೆಗೆಯುತ್ತಿರು ವನು. ಮುಂದಿನ ಮಾತುಗಳು ನಡೆಯುತ್ತಿರುವಾಗ್ಗೆ ಸ್ವಲ್ಪ ಸ್ವಲ್ಪವಾಗಿ ಕತ್ತಲೆಯಾಗುತ್ತಾ ಬರುವುದು.)

ನೋರಾ :—ನಮಸ್ಕಾರ ಡಾಕ್ಟರ್ ರ್‍ಯಾಂಕ್. ಗಂಟೆಯ ಶಬ್ದದ ರೀತಿಯಿಂದಲೇ ನೀನೆಂದು ಗೊತ್ತಾಯಿತು. ತೊರ್ವಾಲ್ಡನ ಚಿಕ್ಕಮನೆಗೆ ಈಗಲೇ ಹೋಗಬೇಡ. ಅವನಿಗೆ ತುಂಬಾ ಕೆಲಸವಿರುವಂತೆ ಕಾಣುತ್ತೆ.

ರ್‍ಯಾಂಕ್ :—ನೀನು—?

ನೋರಾ :—(ಒಳಗೆ ಅವನನ್ನು ಕರೆತಂದು ಬಾಗಿಲು ಹಾಕಿಕೊಂಡು) ನೀನು ಬಂದರೆ ನನಗೆ ಯಾವಾಗಲೂ ಪುರಸತ್ತು ಇದ್ದೇ ಇದೆಯೆಂದು ನಿನಗೆ ತಿಳಿದೇ ಇದೆಯಲ್ಲ.

ರ್‍ಯಾಂಕ್ :—ಬಹಳ ಸಂತೋಷ. ಆ ಪುರಸತ್ತನ್ನು ನನ್ನ ಕೈಲಾದ ಮಟ್ಟಿಗೂ ಉಪಯೋಗಿಸಿಕೊಳ್ಳುತ್ತೇನೆ.

ನೋರಾ :—ಏನು ನಿನ್ನ ಅರ್ಥ ? ಕೈಲಾದಮಟ್ಟಿಗೂ ಉಪಯೋಗಿಸಿಕೊಳ್ಳುತ್ತೇನೆಂದರೆ ?

ರ್ಯಾಂಕ್ :—ಹಾಗಂದರೆ ಅಂಜಿಕೆಯೇನು ನಿನಗೆ ?

ನೋರಾ :—ಏನೋ ಚಮತ್ಕಾರದಿಂದ ಮಾತನಾಡಿದ ಹಾಗೆ ಕಂಡಿತು ! ಯಾಕೆ ? ಏನಾದರೂ ಸಂಭವಿಸಬಹುದೇನು ?

ರ್ಯಾಂಕ್ :—ನಾನು ನಿರೀಕ್ಷಣೆ ಮಾಡುತ್ತಿದ್ದುದು ವಿನಾ ಮತ್ತೇನೂ ಇಲ್ಲ. ಆದರೆ ಇಷ್ಟು ಶೀಘ್ರದಲ್ಲಿ ಆಗುತ್ತೆಂದು ನೆನಸಿರಲಿಲ್ಲ.

ನೋರಾ :—(ಅವನ ತೋಳುಗಳನ್ನು ಬಿಗಿದು ಹಿಡಿದುಕೊಂಡು) ಏನನ್ನು ಪತ್ತೆಮಾಡಿದ್ದೀಯೆ ? ನನಗೆ ಹೇಳಬೇಕು.

ರ್ಯಾಂಕ್ :—(ಒಲೆಯ ಪಕ್ಕದಲ್ಲಿ ಕುಳಿತು) ಇನ್ನು ನನ್ನದೆಲ್ಲಾ ಮುಗಿಯಿತು. ಅಲ್ಲದೆ ಯಾರೂ ಏನೂ ಹೇಳಲಾರರು.

ನೋರಾ :—(ಮನಸ್ಸಿನಲ್ಲಿ ಸ್ವಲ್ಪ ನಿಶ್ಚಿಂತೆಯಾಗಿ) ನಿನ್ನ ವಿಷಯ ಮಾತಾಡುತ್ತಿದ್ದೀಯಾ ?

ರ್ಯಾಂಕ್ :—ಯಾರ ವಿಷಯ ಮತ್ತೆ ? ನನ್ನನ್ನು ನಾನೇ ವಂಚಿಸಿಕೊಳ್ಳುವುದರಿಂದೇನೂ ಉಪಯೋಗ ತೋರಲಿಲ್ಲ. ಮಿಸೆಸ್ ಹೆಲ್ಮರ್, ನಾನು ನೋಡಿದ ವ್ಯಾಧಿಗ್ರಸ್ಥರಲ್ಲೆಲ್ಲಾ ನನ್ನಂತಹ ನಿರ್ಭಾಗ್ಯ ಮತ್ತೊಬ್ಬನಾವನೂ ಇಲ್ಲ. ಕೆಲವು ದಿನಗಳಿಂದ ನನ್ನ ದೇಹಸ್ಥಿತಿಯನ್ನು ಪರೀಕ್ಷೆಮಾಡುತ್ತಿದ್ದೇನೆ. ಏನೂ ಉಪಯೋಗವಿಲ್ಲ. ಇನ್ನೊಂದು ತಿಂಗಳ ಒಳಗಾಗಿ ಭೂಮಿಯ ಕೆಳಗೆ ನಾನು ಕೊಳೆಯುತ್ತಾ ಬಿದ್ದಿರುವೆನು.

ನೋರಾ :—ಇದೇನಿದು ಅಶುಭದ ಮಾತು !

ರ್ಯಾಂಕ್ :—ವಿಷಯ ಕೂಡ ಕುತ್ಸಿತವಾದದ್ದೆ ? ಅಲ್ಲವೆ ? ಅಷ್ಟೇ ಅಲ್ಲ. ಪರಿಣಾಮವು ಪ್ರಾಪ್ತವಾಗುವುದಕ್ಕೆ ಮುಂಚೆ ಇನ್ನೂ ಕುತ್ಸಿತವಾದ ಅವಸ್ಥೆಗಳನ್ನು ಅನುಭವಿಸಬೇಕಾಗುವುದು. ನನ್ನನ್ನು ಮತ್ತೊಮ್ಮೆ ಚೆನ್ನಾಗಿ ಪರೀಕ್ಷೆಮಾಡಿ ನೋಡುತ್ತೇನೆ. ಆದಾದನಂತರ ದೇಹವು ಕ್ಷಿಪ್ರವಾಗಿ ನಶಿಸಿಹೋಗಲು ಪ್ರಾರಂಭ

ವಾಗುತ್ತೆಂಬ ಭಯಂಕರವಾದ ವಿಷಯವು ಗೊತ್ತಾಗುತ್ತದೆ. ನಿನಗೆ ಒಂದು ಮಾತನ್ನು ಹೇಳಬೇಕಾಗಿದೆ. ಹೆಲ್ಮರ್ ಇದ್ದಾನಲ್ಲ ಅವನು ಬಹಳ ರಸಿಕ; ಕುತ್ಸಿತವಾದದ್ದನ್ನೇ ನಾದರೂ ಕಂಡರೆ ಆವನಿಗೆ ಸಹಿಸಲಶಕ್ಯವಾದಷ್ಟು ಅಸಹ್ಯ ಉಂಟಾಗುವುದು. ಆದ್ದರಿಂದ ನನ್ನ ಖಾಯಿಲೆ ಚಿಕ್ಕಮ ನೆಯ ಹೊಸಲು ಮುಟ್ಟಕೂಡದು ಅವನು.

ನೋರಾ :—ಇದೇನಿದು ಡಾಕ್ಟರ್ ರ್‍ಯಾಂಕ್, ಹೀಗೆ ಹೇಳುತ್ತೀಯೆ ?

ರ್‍ಯಾಂಕ್ :—ಅವನು ಅಲ್ಲಿಗೆ ಬರಲು ನನಗೆ ಇಚ್ಛೆಯಿಲ್ಲ. ನನಗೋ ಸ್ಕರ ಬರಕೂಡದು. ನನ್ನ ಮನೆ ಬಾಗಿಲು ಅವನಿಗೆ ಮುಚ್ಚಿ ರುತ್ತೆ. ಕೊನೆಗಾಲ ಸಮಿಾಪಿಸಿತೆಂದು ನನಗೆ ನಿಸ್ಸಂದೇಹ ವಾಗಿ ತಿಳಿದೊಡನೆ ನನ್ನ ಹೆಸರಿನ ಕಾಗದದ ಮೇಲೆ ಕಪ್ಪ ಗಿರುವ ಶಿಲುಬೆಯ ಗುರುತನ್ನು ಬರೆದು ಕಳುಹಿಸುತ್ತೇನೆ. ಆಗ್ಗೆ ನನ್ನ ಹೇಸಿಗೆಯ ಸಾವು ಸಮಿಾಪಿಸಿತೆಂದು ತಿಳಿದುಕೊ.

ನೋರಾ :—ಮತಿಹೀನನಂತೆ ಏನೋ ವಿಪರೀತವಾಗಿ ಮಾತಾಡು ತ್ತಿದ್ದೀಯೆ. ನೀನು ಉಲ್ಲಾಸದಿಂದಿರಬೇಕೆಂದು ನಾನು ಎಷ್ಟು ಆಸೆಯಾಗಿದ್ದೇನೊ!

ರ್‍ಯಾಂಕ್ :—**ಯಮನ ಭಟರು** ನನ್ನ ಜೊತೆಯಲ್ಲಿರುವಾಗ್ಗೆ ಉಲ್ಲಾ ಸವೇ ? ಮತ್ತೊಬ್ಬನ ತಪ್ಪಿಗೆ ನಾನು ಶಿಕ್ಷೆಯನ್ನು ಅನುಭವಿಸ ಬೇಕಲ್ಲ! ಇದು ಯಾವ ನ್ಯಾಯ ? ಪ್ರತಿಯೊಂದು ಸಂಸಾರ ದಲ್ಲೂ ಒಂದಲ್ಲ ಒಂದು ರೀತಿ ಈ ನಿಷ್ಕಾರುಣ್ಯದ ಕರ್ಮ ಫಲವನ್ನು ಯಾರಾದರೂ ಅನುಭವಿಸುತ್ತಲೇ ಇದ್ದಾರೆ—

ನೋರಾ :—(ಕಿವಿಗೆ ಬೆರಳನ್ನಿಟ್ಟುಕೊಂಡು) ಕೆಲಸಕ್ಕೆ ಬರದ ಮಾತು ! ಮನಸ್ಸಿಗೆ ಸಂತೋಷವಾಗುವ ಹಾಗೆ ಏನನ್ನಾದರೂ ಮಾತಾಡು.

ರ್‍ಯಾಂಕ್:—ಓ ! ಅಷ್ಟೆ ತಾನೆ, ಹಾಸ್ಯಾಸ್ಪದವಾದ ಒಂದು ಸಣ್ಣ ವಿಷ ಯವಲ್ಲವೆ ಇದು ? ನನ್ನ ತಂದೆಯ ಯೌವನೋಪಭೋಗ

ಗಳ ಅತ್ಯಾಚಾರದ ಫಲವೇನೆಂದರೆ ನನ್ನ ಬೆನ್ನುಮೂಳೆಗೆ ಬಂದಿರುವ ಕ್ಷಯರೋಗ!

ನೋರಾ:—(ಮೇಜಿನ ಎಡಗಡೆ ಭಾಗದಲ್ಲಿ ಕುಳಿತುಕೊಂಡು) ಅಂದರೆ ರುಚಿರುಚಿಯಾದ ಭಕ್ಷ್ಯಭೋಜ್ಯಗಳನ್ನು ಮಿತಿಯಿಲ್ಲದೆ ಸವಿದ ನೆಂತಲೊ?

ರ್ಯಾಂಕ್:—ಹೌದು. ಮತ್ತು -----

ನೋರಾ:—ವಿಧವಿಧವಾದ ಪಾನೀಯಗಳು–ಪೋರ್ಟ್–'ಷಾಂಪೇನ್'-ರಾಶಿರಾಶಿ, ಹರ್ಷೋತ್ಪಾದಕಗಳಾದ ಈ ವಸ್ತುಗಳು ನಮ್ಮಗಳ ಬೆನ್ನಿನ ಮೂಳೆಯಲ್ಲಿ ಕ್ಷಯರೋಗವನ್ನುಂಟುಮಾಡಿ ತಮ್ಮ ಸೇಡನ್ನು ತೀರಿಸಿಕೊಳ್ಳುವುದನ್ನು ನೋಡಿದರೆ ದುಃಖವಾಗುತ್ತದೆ.

ರ್ಯಾಂಕ್:—ಇವುಗಳನ್ನೆಲ್ಲಾ ಉಂಡುತಿಂದು ಕುಡಿದು ಸುಖವನ್ನು ಪಡೆಯದವರಾದ ನಮ್ಮ ನಿರ್ಭಾಗ್ಯದೇಹದ ಬೆನ್ನುಮೂಳೆಗಳ ಮೇಲೆ ಸೇಡು ತೀರಿಸಿಕೊಳ್ಳುವುದು. "ಸುಖಪಟ್ಟೆವು" ಎಂದು ಮನಸ್ಸಿಗೆ ಒಂದು ಸಮಾಧಾನವೂ ಕೂಡ ಇಲ್ಲವಲ್ಲ!

ನೋರಾ:—ಹೌದು. ಅದು ಎಲ್ಲಕ್ಕಿಂತ ಹೆಚ್ಚು ದುಃಖ.

ರ್ಯಾಂಕ್:—(ಅವಳನ್ನು ದೃಷ್ಟಿಸಿ ಚೆನ್ನಾಗಿ ನೋಡಿ) ಹುಂ!—

ನೋರಾ:—(ಸ್ವಲ್ಪ ಹೊತ್ತಾದಮೇಲೆ) ಏನು ಹುಸಿನಗೆ?

ರ್ಯಾಂಕ್:—ನಾನೆ? ನೀನು ಮೊದಲು ನಕ್ಕವಳು.

ನೋರಾ:—ಇಲ್ಲ ಡಾಕ್ಟರ್ ರ್ಯಾಂಕ್. ಹುಸಿನಗೆ ನಿನ್ನದು ಮೊದಲು!

ರ್ಯಾಂಕ್:—ನೀನು ಇಷ್ಟು ಬಿನ್ನಾಣಗಿತ್ತಿಯೆಂದು ನನಗೆ ತಿಳಿದಿರಲಿಲ್ಲ.

ನೋರಾ:—ನನಗೇನೋ ಈವತ್ತು ಬುದ್ಧಿಯೇ ಸ್ವಾಧೀನವಿಲ್ಲ.

ರ್ಯಾಂಕ್:—ನೋಡಿದರೆ ಹಾಗೆಯೇ ಕಾಣುತ್ತೆ.

ನೋರಾ:—(ತನ್ನ ಕೈಗಳನ್ನು ಅವನ ಭುಜದ ಮೇಲಿಟ್ಟು) ಪ್ರಿಯನಾದ ಅತ್ಯಂತ ಪ್ರಿಯನಾದ ಡಾಕ್ಟರ್ ರ್ಯಾಂಕ್! ತೊರ್ವಾಲ್ಡ್‌ನಿಂದ, ಮತ್ತು ನನ್ನಿಂದ ಅಗಲಿಸಿ ಮೃತ್ಯು ನಿನ್ನನ್ನು ಕರೆದುಕೊಂಡು ಹೋಗಬಾರದು!

ರ್‍ಯಾಂಕ್:—ಇಂತಹ ಕಷ್ಟನಷ್ಟಗಳನ್ನು ಬೇಗನೆ ಸುದಾರಿಸಿಕೊಳ್ಳಬಹುದು. ಹೋದವರನ್ನಾರು ಜ್ಞಾಪಕವಿಟ್ಟುಕೊಂಡಿರುತ್ತಾರೆ.

ನೋರಾ:—(ವ್ಯಾಕುಲದಿಂದ) ಅದನ್ನು ನೀನು ನಂಬುತ್ತೀಯಾ?

ರ್‍ಯಾಂಕ್:—ಜನಗಳು ಹೊಸ ಸಂಬಂಧವನ್ನು ಮಾಡಿಕೊಂಡು ಆ ಮೇಲೆ - - -

ನೋರಾ:—ಯಾರು ಹೊಸ ಸಂಬಂಧವನ್ನು ಮಾಡಿಕೊಳ್ಳುವರು?

ರ್‍ಯಾಂಕ್:—ನೀನು; ಮತ್ತು ಹೆಲ್ಮರ್, ನಾನು ಸತ್ತಮೇಲೆ. ಈಗಾಗಲೆ ಆ ದಾರಿಯನ್ನು ಹಿಡಿದಿದ್ದೀಯೆಂದು ಕಾಣುತ್ತೆ. ನಿನ್ನೆ ರಾತ್ರಿ ಮಿಸೆಸ್ ಲಿಂಡ್‌ಗೆ ಇಲ್ಲಿ ಏನು ಬೇಕಾಗಿತ್ತು?

ನೋರಾ:—ಆ ಬಡಪಾಯಿ ಕ್ರಿಸ್ಟೀನ್ ಕಂಡರೆ ಖಂಡಿತವಾಗಿಯೂ ನಿನಗೆ ಹೊಟ್ಟೆಕಿಚ್ಚು ಇಲ್ಲತಾನೆ?

ರ್‍ಯಾಂಕ್:—ಹೌದು, ಹೊಟ್ಟೆಕಿಚ್ಚಿದೆ. ಈ ಮನೆಯಲ್ಲಿ ನನ್ನ ಸ್ಥಾನಕ್ಕೆ ಬರುವವಳು ತಾನೆ! ನಾನು ಹೋದಮೇಲೆ ಈ ಹೆಂಗಸು - - -

ನೋರಾ:—ಶ್ - - ಶ್ - - ಕೂಗಬೇಡ. ಅವಳು ಪಗ್ಗುಲ ಚಿಕ್ಕ ಮನೆಯಲ್ಲಿರುವಳು.

ರ್‍ಯಾಂಕ್:—ಈ ಪೊತ್ತು ಕೂಡ! ನಾನು ಹೇಳಲಿಲ್ಲವೆ? ನೀನೇ ನೋಡು.

ನೋರಾ:—ನನ್ನ ಬಟ್ಟೆಯನ್ನು ಹೊಲಿದುಕೊಡಲು ಬಂದಿದ್ದಾಳೆ. ಏನಪ್ಪಾ ದೇವರೆ! ನಿನ್ನ ವಿವೇಚನೆ ಎಲ್ಲಿ ಹೋಯಿತು? (ಮತ್ತನೆ ಕುರ್ಚಿಯಮೇಲೆ ಕೂರುವಳು) ಡಾಕ್ಟರ್ ರ್‍ಯಾಂಕ್ ಈಗ ಸ್ವಲ್ಪ ಹಿತವಾಗಿರು. ನಾಳೆ ನಾನು ಎಷ್ಟು ಚೆನ್ನಾಗಿ ನರ್ತನ ಮಾಡುತ್ತೇನೋ ನೀನೇ ನೋಡುವೆ. ನಿನಗೋಸ್ಕರವಾಗಿಯೇ ನರ್ತನ ಮಾಡುತ್ತೇನೆಂದು ತಿಳಿದುಕೊ - - ತೊರ್‍ವಾಲ್ಡನಿಗೂ ಕೂಡ ಅಂತ ಹೇಳಬೇಕಾಗಿಯೇ ಇಲ್ಲ. (ಪೆಟ್ಟಿಗೆಯಿಂದ ಸಾಮಾನುಗಳನ್ನೆಲ್ಲಾ ತೆಗೆಯುವಳು) ಡಾಕ್ಟರ್ ರ್‍ಯಾಂಕ್

ಇಲ್ಲಿ ಬಾ ನನ್ನ ಪಕ್ಕದಲ್ಲಿ ಕುಳಿತುಕೊ, ನಿನಗೆ ಒಂದು ತಮಾಷೆ ತೋರಿಸುತ್ತೇನೆ.

ರ್‍ಯಾಂಕ್:—(ಕುಳಿತುಕೊಂಡು) ಅದೇನದು ?

ನೋರಾ:—ಇವುಗಳನ್ನು ನೋಡು.

ರ್‍ಯಾಂಕ್:—ರೇಷ್ಮೆಯ ಕಾಲುಚೀಲಗಳು.

ನೋರಾ:—ಮೈ ಬಣ್ಣಕ್ಕೆ ಸಾಟಿಯಾದವುಗಳು. ಚೆನ್ನಾಗಿಲ್ಲವೆ ? ಈಗ ಇಲ್ಲಿ ಸ್ವಲ್ಪ ಕತ್ತಲೆ -- ನಾಳೆಯಾದರೊ ---- ಇಲ್ಲ- ಇಲ್ಲ. ನೀನು ನನ್ನ ಹೆಜ್ಜೆಯನ್ನು ನೋಡಬಹುದು ಅಷ್ಟೆ. ಅಥವಾ ಒಂದು ವೇಳೆ ನನ್ನ ಕಾಲನ್ನು ನೋಡುವುದಕ್ಕೆ ನಿನಗೆ ಅಪ್ಪಣೆಯನ್ನು ಕೊಡಬಹುದು.

ರ್‍ಯಾಂಕ್:—ಹುಂ.

ನೋರಾ:—ನನ್ನನ್ನೇಕೆ ಅಷ್ಟು ಪರೀಕ್ಷೆಮಾಡಿ ನೋಡುತ್ತಿರುವೆ ? ಗುತ್ತನಾಗಿ ಕಾಲುಚೀಲಗಳು ಕೂರುತ್ತವೆಯಲ್ಲವೆ ?

ರ್‍ಯಾಂಕ್:—ಆ ವಿಷಯದಲ್ಲಿ ನನ್ನ ಅಭಿಪ್ರಾಯವನ್ನು ಮಾಡಿಕೊಳ್ಳಲು ನನಗೆ ಯಾವ ಸಾಧನವೂ ದೊರಕಿಲ್ಲ.

ನೋರಾ:—(ಅವನನ್ನು ಒಂದು ಕ್ಷಣ ನೋಡಿ) ಏನು ನಾಚಿಕೆ ಮಾತು? (ಕಾಲುಚೀಲದ ತುದಿಯಿಂದ ಮೆಲ್ಲಗೆ ಅವನ ಕಿವಿಯಮೇಲೆ ಹೊಡದು) ಅದು ನಿನಗೆ ತಕ್ಕ ಶಿಕ್ಷೆ. (ಕಾಲುಚೀಲಗಳನ್ನು ಮುಡಿಸುವಳು)

ರ್‍ಯಾಂಕ್:—ಮತ್ಯಾವ ಮನೋಹರ ವಸ್ತುಗಳನ್ನು ನೋಡುವುದಕ್ಕೆ ನಿನ್ನ ಅಪ್ಪಣೆಯುಂಟು ?

ನೋರಾ:—ಯಾವುದೂ ಇಲ್ಲ. ನಿನ್ನ ಕೆಟ್ಟ ಯೋಚನೆಗೆ ಅದೇ ಶಿಕ್ಷೆ. (ಸಾಮಾನುಗಳನ್ನು ನೋಡುತ್ತಾ ಸಣ್ಣ ದನಿಯಲ್ಲಿ ಏನೋ ಒಂದು ಹಾಡಿನ ಮಟ್ಟನ್ನು ಕುರಕುತ್ತಿರುವಳು.)

ರ್‍ಯಾಂಕ್:—(ಸ್ವಲ್ಪ ಸುಮ್ಮನಿದ್ದು) ಇಲ್ಲಿ ಕುಳಿತುಕೊಂಡು ನಿನ್ನೊಡನೆ ಹೀಗೆ ಇಷ್ಟು ಅನ್ಯೋನ್ಯವಾಗಿ ಮಾತನಾಡುತ್ತಿದ್ದರೆ, ಒಂದು ವೇಳೆ ನಾನು ಈ ಮನೆಗೆ ಬರದೇ ಇದ್ದಿದ್ದಲ್ಲಿ

ನನ್ನ ಬಾಳು ಏನಾಗುತ್ತಿತ್ತೋ ಯೋಚಿಸಲು ಕೂಡ ಆಗು ವುದಿಲ್ಲ.

ನೋರಾ:—(ಹುಸಿನಗೆಯೊಡನೆ) ನನ್ನೊಡನೆ ನಮ್ಮ ಮನೆಯವನಂ ತೆಯೇ ನೀನು ಭಾವಿಸಿಕೊಂಡಿದ್ದೀ ಎಂದು ನನ್ನ ನಂಬಿಕೆ.

ರ್ಯಾಂಕ್:—(ತನ್ನ ಮುಂದೆ ನೇರವಾಗಿ ನೋಡುತ್ತಾ ಮೆಲ್ಲನೆ) ಈಗ ಇವು ಗಳನ್ನೆಲ್ಲಾ ಬಿಟ್ಟುಬಿಡಬೇಕಾಗಿದೆಯಲ್ಲ!

ನೋರಾ:—ಹುಚ್ಚು ಮಾತನ್ನಾಡಬೇಡ--ಯಾವುದನ್ನೂ ನೀನು ಬಿಡುವುದಿಲ್ಲ!

ರ್ಯಾಂಕ್:—ಕೃತಜ್ಞತಾ ಭಾವಸೂಚಕವಾದದ್ದೊಂದನ್ನೂ ಹಿಂದೆ ಬಿಡಲಿಲ್ಲ; ಒಂದು ಕ್ಷಣವಾದರೂ ಮರುಕಪಡಲಿಲ್ಲ; ಸ್ಥಾನ ವನ್ನು ಖಾಲಿಮಾಡಿ ಹೊರಟುಹೋಗುವುದು! ಆ ಸ್ಥಾನ ವನ್ನು, ಮೊಟ್ಟಮೊದಲು ಯಾರುಬರುತ್ತಾರೆ ಅವರು ಮಿಕ್ಕವ ರಂತೆಯೇ ಆಕ್ರಮಿಸಿಕೊಳ್ಳುವುದು!

ನೋರಾ:—ಈಗ ನಾನು ನಿನ್ನನ್ನು ಒಂದು ಪ್ರಾರ್ಥಿಸಿದರೆ—ಇಲ್ಲ!

ರ್ಯಾಂಕ್:—ಏನನ್ನು ಪ್ರಾರ್ಥಿಸಿದರೆ?

ನೋರಾ:—ನಿನ್ನ ಸ್ನೇಹಕ್ಕೆ ಒಂದು ದೊಡ್ಡ ಸಾಕ್ಷಿ.

ರ್ಯಾಂಕ್:—ಹೇಳು, ಹೇಳು—

ನೋರಾ:—ಅತ್ಯಧಿಕವಾದ ದೊಡ್ಡ ಉಪಕಾರ—

ರ್ಯಾಂಕ್:—ಒಂದು ಬಾರಿಯಾದರೂ ನನ್ನನ್ನು ಅಷ್ಟು ಧನ್ಯನ ನ್ನಾಗಿ ಮಾಡುವೆಯಾ?

ನೋರಾ:—ಆಹಾ! ನಾನು ಏನು ಕೇಳುತ್ತೇನೋ ನಿನಗಿನ್ನೂ ಗೊತ್ತಿಲ್ಲ!

ರ್ಯಾಂಕ್:—ಗೊತ್ತಿಲ್ಲ-ಆದರೆ, ಹೇಳು.

ನೋರಾ:—ಇಲ್ಲ ಡಾಕ್ಟರ್ ರ್ಯಾಂಕ್, ಕೇಳಲಾರೆ. ಅದು ನ್ಯಾಯ ವಾಗಿ ಕೇಳಬಹುದಾದ್ದನ್ನೆಲ್ಲಾ ಮೀರಿದ್ದು. ಅದು ನನ ಗೊಂದು ಸಲಹೆ, ಒಂದು ಸಹಾಯ, ಒಂದು ದೊಡ್ಡ ಉಪ ಕಾರ—

ರ್‍ಯಾಂಕ್:—ಅದು ಎಷ್ಟು ದೊಡ್ಡದಾದರೆ ಅಷ್ಟೂ ಒಳ್ಳೆಯದು. ನಿನ್ನ ಮನಸ್ಸಿನಲ್ಲಿರುವುದೇನೋ ನನಗೆ ಗೊತ್ತಾಗುವುದಿಲ್ಲ. ದಯ ವಿಟ್ಟು ಹೇಳು. ನನ್ನಲ್ಲಿ ನಂಬಿಕೆ ಇಲ್ಲವೆ?

ನೋರಾ:—ಎಲ್ಲರಿಗಿಂತಲೂ ನಿನ್ನಲ್ಲಿ ನಂಬಿಕೆ ಹೆಚ್ಚಾಗಿದೆ. ನಿನ್ನಷ್ಟು ಸತ್ಯವಂತನಾದ ಮತ್ತು ಅತ್ಯುತ್ತಮನಾದ ಸ್ನೇಹಿತ ನನಗೆ ಇನ್ನೊಬ್ಬರಿಲ್ಲ. ನನ್ನ ಮನಸ್ಸಿನಲ್ಲಿರುವುದನ್ನು ಹೇಳುತ್ತೇನೆ ಕೇಳು. ಡಾಕ್ಟರ್ ರ್‍ಯಾಂಕ್ ಒಂದು ವಿಷಯವಿದೆ. ಅದನ್ನು ತಪ್ಪಿಸುವುದಕ್ಕೆ ನೀನು ಸಹಾಯ ಮಾಡಬೇಕು. ತೊರ್ವಾಲ್ಡನು ಭಾರ್‍ಯಾನಿರತನಾಗಿ, ವರ್ಣಿಸಲಸಾಧ್ಯವಾದಷ್ಟು ನನ್ನಲ್ಲಿ ಪ್ರೇಮಾತಿಶಯವನ್ನಿಟ್ಟಿದ್ದಾನೆ. ತನ್ನ ಪ್ರಾಣವನ್ನು ಬೇಕಾದರೂ ಕೊಡಲು ಒಂದು ಕ್ಷಣವೂ ಹಿಂತೆಗೆಯುವುದಿಲ್ಲ.

ರ್‍ಯಾಂಕ್:—(ಅವಳ ಕಡೆ ಸ್ವಲ್ಪ ಸರಿಯುತ್ತಾ) ನೋರಾ, ಅವನೊಬ್ಬನೇಯೆ?

ನೋರಾ:—(ಸ್ವಲ್ಪ ಚಕಿತಳಾಗಿ) ಒಬ್ಬನೇಯೆ?—?

ರ್‍ಯಾಂಕ್:—ಒಬ್ಬನೇಯೆ ನಿನಗೋಸ್ಕರವಾಗಿ ಪ್ರಾಣವನ್ನು ಕೊಡತಕ್ಕವನು?

ನೋರಾ:—(ವ್ಯಸನದಿಂದ) ಹಾಗೋ?

ರ್‍ಯಾಂಕ್:—ನಾನು ಹೋಗುವುದಕ್ಕೆ ಮುಂಚಿತವಾಗಿ ಅದನ್ನು ನಿನಗೆ ತಿಳಿಸಬೇಕೆಂದು ಸಂಕಲ್ಪಮಾಡಿದ್ದೆ. ಇದಕ್ಕಿಂತಲೂ ಅನುಕೂಲವಾದ ಸಮಯವು ದೊರಕಲಾರದು. ನೋರಾ ಈಗ ನಿನಗೆ ಗೊತ್ತಾಯಿತು. ಅಲ್ಲದೆ ಇನ್ನು ಯಾರಲ್ಲೂ ಇಡಲಾರದ ನಂಬುಗೆಯನ್ನು ನನ್ನಲ್ಲಿಡಬಹುದೆಂದೂ ನಿನಗೆ ಗೊತ್ತಾಯಿತು.

ನೋರಾ:—(ಯೋಚನೆ ಮಾಡುತ್ತಾ ಎದ್ದು ಮೆಲ್ಲನೆ) ನಾನು ಹೊರಡುತ್ತೇನೆ, ದಾರಿ ಬಿಡು.

ರ್‍ಯಾಂಕ್:—(ಅವಳಿಗೆ ದಾರಿಬಿಟ್ಟು ಅಲ್ಲೇ ಕುಳಿತುಕೊಂಡು) ನೋರಾ!

ನೋರಾ:—(ಹಜಾರದ ಬಾಗಿಲ ಹತ್ತಿರ ನಿಂತು) ಹೆಲ್ಸ್ ದೀಪವನ್ನು ಒಳಕ್ಕೆ ತೆಗೆದುಕೊಂಡು ಬಾ. (ಒಲೆಯ ಹತ್ತಿರ ಹೋಗಿ) ಡಾಕ್ಟರ್ ರ್‍ಯಾಂಕ್ ನೀನು ಬಹಳ ಘೋರವಾದ ಮಾತುಗಳನ್ನಾಡಿದೆ.

ರ್‍ಯಾಂಕ್:—ಇನ್ನೊಬ್ಬರಂತೆ ನಾನೂ ನಿನ್ನಲ್ಲಿ ಅನುರಕ್ತನಾಗಿರುವುದು ಘೋರವೆ?

ನೋರಾ:—ಅದಲ್ಲ, ಆದರೆ ಹಾಗೆಂದು ನನ್ನೆದುರಿಗೆ ಹೇಳುವುದು? ಅವಶ್ಯಕತೆ ಇರಲಿಲ್ಲವಲ್ಲ—

ರ್‍ಯಾಂಕ್:—ಏನು? ಹಾಗಾದರೆ ನಿನಗೆ ಗೊತ್ತಿತ್ತೆ—?

(ಸೇವಕಳು ಒಳಗೆ ದೀಪವನ್ನು ತರುವಳು. ಮೇಜಿನಮೇಲಿಟ್ಟು ಹೊರಟುಹೋಗುವಳು.) ನೋರಾ—ಮಿಸೆಸ್ ಹೆಲ್ಮರ್, ಈ ವಿಷಯದಲ್ಲಿ ನಿನಗೆ ಅನುಮಾನವೇನಾದರೂ ಇತ್ತೆ?

ನೋರಾ:—ಅನುಮಾನವಿತ್ತೋ ಇಲ್ಲವೋ ನಾನೇನು ಬಲ್ಲೆ? ನಾನು ಏನೂ ಹೇಳಲಾರೆ—ಏನು ಅಸಡ್ಡಾಳುತನ ಡಾಕ್ಟರ್ ರ್‍ಯಾಂಕ್? ಎಷ್ಟು ಚೆನ್ನಾಗಿ ಎಲ್ಲವೂ ನಡೆದುಕೊಂಡು ಬರುತ್ತಿತ್ತು!

ರ್‍ಯಾಂಕ್:—ಏನಾದರೂ ಆಗಲಿ, ನನ್ನ ದೇಹಪ್ರಾಣಗಳು ನಿನ್ನ ಆಜ್ಞಾಧೀನಗಳಾಗಿವೆಯೆಂದು ಈಗ ನಿನಗೆ ಚೆನ್ನಾಗಿ ಗೊತ್ತಾಗಿದೆ. ಅದೇನು ಮನಸ್ಸಿನಲ್ಲಿ, ಹೇಳಿಬಿಡಬಾರದೆ?

ನೋರಾ:—(ಅವನನ್ನು ನೋಡುತ್ತಾ) ಇದೆಲ್ಲಾ ನಡೆದಮೇಲೆ?

ರ್‍ಯಾಂಕ್:—ಅದು ಏನು, ಬೇಡಿಕೊಳ್ಳುತ್ತೇನೆ ಹೇಳು.

ನೋರಾ:—ಈಗ ಏನನ್ನೂ ಹೇಳಲಾರೆ.

ರ್‍ಯಾಂಕ್:—ಹೇಳಬೇಕು, ಹೇಳಬೇಕು, ಈ ರೀತಿ ನನ್ನನ್ನು ಶಿಕ್ಷಿಸಕೂಡದು, ಮನುಷ್ಯನು ಮಾಡಬಹುದಾದುದೇನಿದ್ದರೂ ನಾನು ಮಾಡಲು ಅಪ್ಪಣೆಯನ್ನು ಕೊಡು.

ನೋರಾ:—ನನಗೋಸ್ಕರ ಈಗ ನೀನು ಮಾಡಬೇಕಾದ್ದೇನೂ ಇಲ್ಲ. ಅದೂ ಅಲ್ಲದೆ ನಿಜವಾಗಿಯೂ ನನಗೆ ಯಾವ ಸಹಾಯವೂ

ಬೇಡ. ಸುಮ್ಮನೆ ಏನೋ ತಮಾಷೆಗೋಸ್ಕರ ಹಾಗೆ ಕೇಳಿದೆನೆಂದು ನಿನಗೆ ಗೊತ್ತಾಗುತ್ತೆ. ನಿಜವಾಗಿಯೂ ತಮಾಷೆಗೋಸ್ಕರ! ಅಷ್ಟಲ್ಲದೆ ಇನ್ನೇನು! (ತೂಗಾಡುವ ಕುರ್ಚಿಯ ಮೇಲೆ ಕುಳಿತು ಅವನನ್ನು ನೋಡುತ್ತಾ ಸ್ವಲ್ಪ ಹುಸಿನಗೆ ನಕ್ಕು) ನೀನು ಒಳ್ಳೆಯ ಮನುಷ್ಯ ಡಾಕ್ಟರ್ ರ್‍ಯಾಂಕ್, ಬೆಳಕು ಬಂತಲ್ಲ, ಈಗಲಾದರೂ ನಿನಗೆ ನಾಚಿಕೆಯಾಗುವುದಿಲ್ಲವೆ?

ರ್‍ಯಾಂಕ್:—ಸ್ವಲ್ಪವೂ ಇಲ್ಲ—ಈಗ ನಾನು ಹೊರಟು ಹೋಗುವುದು ವಾಸಿ ಅಂತ ಕಾಣುತ್ತೆ-ತಿರುಗಿ ಬರದೆ?

ನೋರಾ:—ಉಂಟೆ? ಉಂಟೆ? ನೀನು ಹಾಗೆ ಹೋಗಕೂಡದು. ನೀನು ಎಂದಿನಂತೆ ಪ್ರತಿದಿನವೂ ಬಂದೇ ಬರಬೇಕು. ತೊರ್ವಾಲ್ಡನು ನಿನ್ನನ್ನು ಬಿಟ್ಟಿರಲಾರನೆಂದು ನಿನಗೆ ಚೆನ್ನಾಗಿ ಗೊತ್ತಿದೆ.

ರ್‍ಯಾಂಕ್:—ಹೌದು ಆದರೆ ನೀನು?

ನೋರಾ:—ನೀನು ಬಂದರೆ ನನಗೆ ಯಾವಾಗಲೂ ಅತ್ಯಂತ ಸಂತೋಷ.

ರ್‍ಯಾಂಕ್:—ನೀನು ತೋರಿಸಿದ ಆ ಸಂತೋಷವೇ ನನ್ನನ್ನು ತಪ್ಪು ದಾರಿಗೆ ಎಳೆದದ್ದು. ನೀನು ಒಂದು ಒಗಟು. ಎಷ್ಟೋ ಸಾರಿ ನನಗೆ ತೋಚಿದೆ. ಹೆಲ್ಮರನ ಜೊತೆಯಲ್ಲಿದ್ದರೆ ನಿನಗೆ ಎಷ್ಟು ಸಂತೋಷವೋ ನನ್ನೊಡನಿದ್ದರೂ ಅಷ್ಟೂ ಅಷ್ಟು ಸಂತೋಷ, ಅಂತ.

ನೋರಾ:—ಹೌದು ಕೆಲವು ಜನರಲ್ಲಿ ಅನುರಾಗವಿರುವುದು. ಮತ್ತೆ ಕೆಲವರಲ್ಲಿ ಕೇವಲ ಸ್ನೇಹಮಾತ್ರವಿರುವುದು, ಅಲ್ಲವೆ?

ರ್‍ಯಾಂಕ್:—ಆ ಮಾತುಗಳಲ್ಲಿ ಸ್ವಲ್ಪ ವಿವೇಚನೆಯಿದೆ.

ನೋರಾ:—ನಾನು ತವರು ಮನೆಯಲ್ಲಿದ್ದಾಗ್ಗೆ ನನ್ನ ತಂದೆಯ ಮೇಲೆ ಹೆಚ್ಚು ಪ್ರೀತಿಯಿತ್ತು. ಹಾಗಿದ್ದರೂ ಎಷ್ಟೋ ಸಾರಿ ಒಬ್ಬರಿಗೂ ಕಾಣದ ಹಾಗೆ ಕಳ್ಳತನದಿಂದ ಹೆಣ್ಣಾಳುಗಳ

ಚಿಕ್ಕಮನೆಗೆ ಬರುತ್ತಿದ್ದೆ. ಅವರು ನನ್ನ ತಂದೆಯಂತೆಯೇ ಸದಾ ಬುದ್ಧಿವಾದದ ಮಾತುಗಳನ್ನೇ ಆಡುತ್ತಿರಲಿಲ್ಲ. ಅವರುಗಳು ಒಬ್ಬರನ್ನೊಬ್ಬರು ಕುರಿತು ಏನೇನೋ ತಮಾಷೆಮಾತುಗಳನ್ನಾಡಿಕೊಳ್ಳುತ್ತಿದ್ದರು.

ರ್‍ಯಾಂಕ್ :—ಈಗ ಗೊತ್ತಾಯಿತು. ಆ ಹೆಣ್ಣಾಳುಗಳ ಸ್ಥಾನಕ್ಕೆ ಈಗ ನಾನು.

ನೋರಾ :—(ಚಿಮ್ಮಿ ಎದ್ದು ಅವನ ಹತ್ತಿರ ಹೋಗಿ) ಡಾಕ್ಟರ್ ರ್‍ಯಾಂಕ್ ನಯನೀತಿಯುಕ್ತಿಗಳನ್ನು ತಿಳಿದ ಪ್ರಿಯ ರ್‍ಯಾಂಕ್, ಅದು ಎಂದಿಗೂ ನನ್ನ ಅರ್ಥವಲ್ಲ. ನಿನಗೆ ಮನಸ್ಸಿಗೆ ಹೊಳೆಯಲಿಲ್ಲವೆ ? ತೊರ್‍ವಾಲ್ಡನ ಜೊತೆಯಲ್ಲಿರುವುದು ಕೆಲವು ವಿಧಗಳಲ್ಲಿ ನನ್ನ ತಂದೆಯ ಜೊತೆಯಲ್ಲಿದ್ದಂತೆಯೇ ಅಲ್ಲವೆ ? (ಹಜಾರದಿಂದ ಹೆಣ್ಣಾಳು ಬರುವಳು)

ಹೆಣ್ಣಾಳು :—ಅಮ್ಮಾ (ಪಿಸುಗುಟ್ಟಿ ಕೈಗೆ ಒಂದು ಕಾಗದದಚೂರನ್ನು ಕೊಡುವಳು)

ನೊರಾ :—(ಹೆಸರನ್ನು ಓದಿನೋಡಿ) ಓಹೋ! (ತನ್ನ ಜೇಬಿನಲ್ಲಿಡುವಳು)

ರ್‍ಯಾಂಕ್ :—ಯಾಕೆ ಏನು ಹೆಚ್ಚುಕಡಿಮೆಯಾಯಿತು ?

ನೋರಾ :—ಇಲ್ಲ. ಇಲ್ಲ. ಏನೂ ಇಲ್ಲ! ಏನೋ ಒಂದು ಸಣ್ಣ ವಿಷಯ ನನ್ನ ಹೊಸ ಉಡುಪಿನ ವಿಷಯ—

ರ್‍ಯಾಂಕ್ :—ನಿನ್ನ ಉಡುಪೆ? ಅಲ್ಲೇ ಇದೆಯಲ್ಲ!

ನೋರಾ :—ಹೌದು. ಅದು ಅಲ್ಲೇ ಇದೆ. ಇದು ಮತ್ತೊಂದು ಉಡುಪು, ಅದನ್ನು ನಾನು ಕೊಂಡು ಕೊಂಡೆ. ಆದರೆ ಅದು ತೊರ್‍ವಾಲ್ಡನಿಗೆ ತಿಳಿಯಕೂಡದು—

ರ್‍ಯಾಂಕ್ :—ಓಹೋ– ಅದೇಯೇ ನಿನ್ನ ದೊಡ್ಡಗುಟ್ಟು!

ನೋರಾ:—ಹೌದು ಅದೇಯೆ. ನೀನು ಅವನ ಬಳಿ ಹೋಗು, ತನ್ನ ಚಿಕ್ಕಮನೆಯಲ್ಲಿ ಕುಳಿತುಕೊಂಡಿದಾನೆ. ನಿನ್ನ ಕೈಲಾದಷ್ಟು ಹೊತ್ತು ಅವನನ್ನು—

ರ್ಯಾಂಕ್:—ಯೋಚಿಸಬೇಡ. ನನ್ನ ಕೈಬಿಟ್ಟು ಅವನು ತಪ್ಪಿಸಿಕೊಂಡು ಹೋಗದಹಾಗೆ ನೋಡಿಕೊಳ್ಳುತ್ತೇನೆ. (ಹೆಲ್ಮರನ ಚಿಕ್ಕಮನೆಯೊಳಗೆ ಹೋಗುವನು)

ನೋರಾ:—(ಸೇವಕಳನ್ನು ಕುರಿತು) ಅಡಿಗೆ ಮನೆಯಲ್ಲಿ ನಿಂತುಕೊಂಡಿದ್ದಾನೆಯೆ ?

ಹೆಣ್ಣಾಳು:—ಹೌದು, ಹಿತ್ತಲು ಕಡೆ ಮೆಟ್ಟಲು ಹತ್ತಿಕೊಂಡು ಬಂದ.

ನೋರಾ:—ಮನೆಯಲ್ಲಿ ಯಾರೂ ಇಲ್ಲವೆಂದು ನೀನು ಹೇಳಲಿಲ್ಲವೆ ?

ಹೆಣ್ಣಾಳು:—ಹೇಳಿದೆ. ಆದರೆ ಉಪಯೋಗವೇನು ?

ನೋರಾ:—ಹಾಗಾದರೆ ಅವನು ಹೊರಟು ಹೋಗುವುದಿಲ್ಲವೆ ?

ಹೆಣ್ಣಾಳು:—ಇಲ್ಲ. ನಿಮ್ಮನ್ನು ಕಂಡು ಮಾತಾಡದೆ ಹೋಗುವುದಿಲ್ಲವೆಂದು ಹೇಳುತ್ತಾನೆ.

ನೋರಾ:—ಹಾಗಾದರೆ ಒಳಗೆ ಬರಲಿ-ಮೆಲ್ಲನೆ ನಿಶ್ಶಬ್ದವಾಗಿ, ಹೆಲ್ಸ್-ನೀನು ಅವನು ಇಲ್ಲಿ ಬಂದಿದ್ದ ವಿಷಯವನ್ನು ಯಾರಿಗೂ ತಿಳಿಸಕೂಡದು. ನನ್ನ ಗಂಡನಿಗೆ ಒಂದು ಚಮತ್ಕಾರವನ್ನು ತೋರಿಸಬೇಕೆಂದಿದೇನೆ.

ಹೆಣ್ಣಾಳು :—ಸರಿಯಮ್ಮ—-ನನಗೆಲ್ಲಾ ಅರ್ಥವಾಯಿತು. (ಹೋಗುವಳು.)

ನೋರಾ:—ಭಯಂಕರ ಘಟನೆ ಇನ್ನು ಸಮೀಪಿಸಿತು ನನ್ನ ಪ್ರಯತ್ನಗಳನ್ನೆಲ್ಲಾ ಮೀರಿ ನಡೆದುಹೋಗುತ್ತೆ. ಇಲ್ಲ—ಇಲ್ಲ! ಇಲ್ಲ!!! ನಡೆಯಲಾರದು! ಖಂಡಿತವಾಗಿಯೂ ನಡೆಯಕೂಡದು!! (ಹೆಲ್ಮರಿನ ಚಿಕ್ಕಮನೆ ಚಿಲುಕ ಹಾಕಿಕೊಳ್ಳುವಳು. ಸೇವಕಳು ಮತ್ತೊಂದು ಬಾಗಿಲು ತೆಗೆದು ಕ್ರಾಗ್‌ಸ್ಟಾಡನನ್ನು ಒಳಗೆ ಬಿಟ್ಟು ಪುನಃ ಬಾಗಿಲು ಹಾಕಿಕೊಳ್ಳುವಳು. ಕ್ರಾಗ್‌ಸ್ಟಾಡನು ತುಪ್ಪಟದ ಅಂಗಿ ಉದ್ದವಾದ ಮೋಜು ಮತ್ತು ತುಪ್ಪಟದ ಟೋಪಿ ಇವುಗಳನ್ನು ಧರಿಸಿದ್ದಾನೆ.)

ನೋರಾ:—(ಅವನ ಕಡೆ ಮುಂದುವರಿದು) ಮೆಲ್ಲನೆ ಮಾತಾಡು. ನನ್ನ ಗಂಡ ಮನೆಯಲ್ಲಿದ್ದಾನೆ.

ಕ್ರಾಗ್‌ಸ್ಟಾಡ್:—ಇದ್ದರೇನೂ ಪರವಾ ಇಲ್ಲ.

ನೋರಾ:—ನನ್ನಿಂದೇನಾಗಬೇಕು ?

ಕ್ರಾಗ್‌ಸ್ಟಾಡ್:—ನಡೆದುಹೋದ ವಿಷಯವೊಂದರಲ್ಲಿ ನಿನ್ನ ಹೇಳಿಕೆ.

ನೋರಾ:—ತ್ವರಿಮಾಡು ಯಾವ ವಿಷಯ ?

ಕ್ರಾಗ್‌ಸ್ಟಾಡ್:—ನನಗೆ ಬರತರ್ಫ ಆದದ್ದು ನಿನಗೆ ಗೊತ್ತಿರಬಹುದು.

ನೋರಾ:—ಅದನ್ನು ತಪ್ಪಿಸಲು ನನ್ನ ಕೈಲಾಗಲಿಲ್ಲ. ನಿನ್ನ ಪರವಾಗಿ ನನ್ನ ಕೈಲಾದಷ್ಟು ಹೊಡೆದಾಡಿದೆ. ಆದರೆ ನಿಷ್ಫಲವಾಯಿತು.

ಕ್ರಾಗ್‌ಸ್ಟಾಡ್:—ನಿನ್ನ ಗಂಡನಿಗೆ ನಿನ್ನಮೇಲಿನ ಅನುರಾಗವು ಇಷ್ಟೇಯೆ ? ನಿನ್ನ ಗುಟ್ಟನ್ನು ರಟ್ಟುಮಾಡಬಲ್ಲೆನೆಂದು ಅವನಿಗೆ ಗೊತ್ತು. ಆದಾಗ್ಗೂ ಲಕ್ಷ್ಯವಿಲ್ಲದೆ—

ನೋರಾ:—ಈ ವಿಷಯದಲ್ಲೇನಾದರೂ ನನ್ನ ಗಂಡನಿಗೆ ಗೊತ್ತಿರಬಹುದೆಂದು ಹೇಗೆ ಊಹಿಸುತ್ತೀಯೆ ?

ಕ್ರಾಗ್‌ಸ್ಟಾಡ್:—ನಾನು ಹಾಗೆ ಊಹಿಸಲೇ ಇಲ್ಲ. ಯಾಕಂದರೆ ತಿಳಿದೂ ಕೂಡ ಹೆಲ್ಮರನು ಇಷ್ಟು ಧೈರ್ಯ ತೋರಿಸುವನೆಂದು ನಾನೆಂದೂ ನಂಬಲಾರೆ.

ನೋರಾ:—ದಯವಿಟ್ಟು ನನ್ನ ಗಂಡನ ವಿಷಯದಲ್ಲಿ ಮರ್ಯಾದೆಯಿಂದ ಮಾತನ್ನಾಡಬೇಕು.

ಕ್ರಾಗ್‌ಸ್ಟಾಡ್:—ಅಗತ್ಯವಾಗಿ ಆಗಬಹುದು. ಅವನ ಯೋಗ್ಯತೆಗೆ ತಕ್ಕ ಮರ್ಯಾದೆ. ಆದರೆ ಈ ವಿಷಯವನ್ನು ನೀನು ಇಷ್ಟು ಗುಟ್ಟಾಗಿಟ್ಟಿರುವುದರಿಂದ ನಿನ್ನೆಗಿಂತ ಈ ಪೊತ್ತಿಗೆ ನೀನು ಮಾಡಿರುವ ಕೆಲಸದ ಯೋಗ್ಯತೆ ನಿನಗೆ ಸ್ವಲ್ಪ ಮಂದಟ್ಟಾಗಿರಬಹುದೆಂದು ಊಹಿಸುತ್ತೇನೆ.

ನೋರಾ:—ನಿನ್ನ ಪಾತಕ್ಕಿಂತಲೂ ಚೆನ್ನಾಗಿ ಮಂದಟ್ಟಾಗಿದೆ.

ಕ್ರಾಗ್‌ಸ್ಟಾಡ್:—ನಾನು ಪ್ರವೀಣನಾದಂಥ ಲಾಯರ್ ಕೂಡ ಅಲ್ಲ.

ನೋರಾ:—ಈಗ ನನ್ನಿಂದೇನಾಗಬೇಕು ?

ಕ್ರಾಗ್‌ಸ್ಟಾಡ್:—ಏನೂ ಇಲ್ಲ, ನಿನ್ನ ಯೋಗಕ್ಷೇಮವನ್ನು ವಿಚಾರಿಸಿಕೊಂಡು ಹೋಗೋಣವೆಂದು ಬಂದೆ, ಮಿಸೆಸ್ ಹೆಲ್ಮರ್! ಬೆಳಗಿನಿಂದಲೂ ನಿನ್ನನ್ನೇ ಯೋಚನೆ ಮಾಡುತ್ತಿದ್ದೆ. ಏನೋ ಒಬ್ಬ ಸಾಮಾನ್ಯ ಸರಾಫ, ಒಬ್ಬ ಬಡಪಾಯಿ ಗುಮಾಸ್ತ ; ಒಬ್ಬ—ನನ್ನಂಥ ಒಂದು ಪ್ಯಾದೆ—ಅಂಥಾವನಿಗೆ ಕೂಡ ಕನಿಕರ ಭಾವವಿರಬಹುದಲ್ಲವೆ ?

ನೋರಾ:—ಹಾಗಾದರೆ ಕನಿಕರವನ್ನು ತೋರಿಸು ಮತ್ತೆ. ನನ್ನ ಮಕ್ಕಳ ಗತಿಯನ್ನು ಯೋಚನೆ ಮಾಡು.

ಕ್ರಾಗ್‌ಸ್ಟಾಡ್:—ನೀನೂ ಮತ್ತು ನಿನ್ನ ಗಂಡ ಇಬ್ಬರೂ ನನ್ನ ಮಕ್ಕಳ ವಿಷಯವನ್ನೇನಾದರೂ ಯೋಚಿಸಿದಿರಾ ? ಪರವಾಗಿಲ್ಲ ; ಆ ಮಾತು ಈಗ ಬೇಡ. ನಾನು ಏನು ಹೇಳಬೇಕೆಂದಿದ್ದೇನೆಂದರೆ, ಈ ವಿಷಯವನ್ನು ನೀನು ಮನಸ್ಸಿಗೆ ಅಷ್ಟು ಹಚ್ಚಿಸಿಕೊಳ್ಳತಕ್ಕ ಆವಶ್ಯಕತೆ ಇಲ್ಲವೆಂದು! ಮೊಟ್ಟಮೊದಲು ನಾನು ನಿನ್ನ ಮೇಲೆ ಫಿರ್ಯಾದಿ ಮಾಡುವುದಿಲ್ಲ.

ನೋರಾ:—ಇಲ್ಲ-ಖಂಡಿತವಾಗಿಯೂ ಇಲ್ಲ. ಅದು ನನಗೆ ಚೆನ್ನಾಗಿ ಗೊತ್ತೇ ಇತ್ತು !

ಕ್ರಾಗ್‌ಸ್ಟಾಡ್:—ಪ್ರತಿಯೊಂದನ್ನೂ ರಾಜಿಯಿಂದಲೇ ಸರಿಪಡಿಸಿಕೊಳ್ಳಬಹುದು. ಹೊರಗಿನವರಿಗೆ ಯಾಕೆ ಈ ವಿಷಯ ತಿಳಿಯಬೇಕು? ಈ ಗುಟ್ಟು ನಮ್ಮ ಮೂವರಲ್ಲೇ ಇರಲಿ.

ನೋರಾ:—ಇದರ ವಿಷಯ ನನ್ನ ಗಂಡನಿಗೆ ಸ್ವಲ್ಪವೂ ತಿಳಿಯಕೂಡದು.

ಕ್ರಾಗ್‌ಸ್ಟಾಡ್:—ಅವನ ತಿಳಿವಳಿಕೆಗೆ ಬರುವುದನ್ನು ನೀನು ಹೇಗೆ ತಪ್ಪಿಸಬಲ್ಲೆ ? ಹಾಗಾದರೆ ಬಾಕಿಯಿರುವ ಸಾಲವನ್ನು ತೀರಿಸಲು ಸಿದ್ಧವಾಗಿದ್ದೀಯಾ ?

ನೋರಾ:—ಈಗ ಸದ್ಯಃ ಆಗುವುದಿಲ್ಲ.

ಕ್ರಾಗ್‌ಸ್ಟಾಡ್:—ಬೇರೆ ಹಣವನ್ನು ಒದಗಿಸುವ ಸಂಚು ಏನಾದರೂ ಮಾಡಿದ್ದೀಯಾ ?

ನೋರಾ:—ನನಗೆ ಉಪಯೋಗವಾದ ಸಂಚು ಯಾವುದೂ ಇಲ್ಲ !

ಕ್ರಾಗ್‌ಸ್ಟಾಡ್:—ಏನಾದರೂ ಆಗಲಿ ಅದರಿಂದೇನೂ ಉಪಯೋಗವಾಗುತ್ತಿರಲಿಲ್ಲ. ಯಾಕಂದರೆ ಥೈಲಿ ಥೈಲಿ ಹಣವನ್ನು ನನ್ನೆದುರಿಗೆ ತಂದು ಸುರಿದರೂ ನಾನು ಪತ್ರವನ್ನು ವಾಪಸ್ಸು ಕೊಡುವುದಿಲ್ಲ.

ನೋರಾ:—ಆ ಪತ್ರವನ್ನಿಟ್ಟುಕೊಂಡು ಏನು ಮಾಡುತ್ತೀಯೆ ?

ಕ್ರಾಗ್‌ಸ್ಟಾಡ್:—ಅದನ್ನು ಭದ್ರವಾಗಿಟ್ಟಿರುತ್ತೇನೆ. ನನ್ನ ಹತ್ತಿರವೇ ಇರುತ್ತದೆ. ಅದಕ್ಕೆ ಸಂಬಂಧಪಡದೇ ಇರುವರು ಯಾರಿಗೂ ಅದರ ಸುಳಿವೇ ಗೊತ್ತಾಗುವುದಿಲ್ಲ. ಆದ್ದರಿಂದ ಆ ಪತ್ರದ ವಿಷಯವಾಗಿ ನಿರಾಶಳಾಗಿ ಮನಸ್ಸಿನಲ್ಲಿ ಏನಾದರೂ ಕೆಟ್ಟ ಸಂಕಲ್ಪ—

ನೋರಾ:—ಮಾಡಿದ್ದೆ.

ಕ್ರಾಗ್‌ಸ್ಟಾಡ್:—ಮನೆಯಿಂದ ಓಡಿಹೋಗುವುದು—

ನೋರಾ:—ಅದೂ—

ಕ್ರಾಗ್‌ಸ್ಟಾಡ್:—ಅಥವಾ ಅದಕ್ಕಿಂತಲೂ ಘೋರ—

ನೋರಾ:—ನಿನಗೆ ಅದು ಹೇಗೆ ತಿಳಿಯಿತು ?

ಕ್ರಾಗ್‌ಸ್ಟಾಡ್:—ಆ ಯೋಚನೆಯನ್ನು ಬಿಟ್ಟುಬಿಡು.

ನೋರಾ:—ನಾನು ಅದನ್ನೂ ಯೋಚಿಸಿದ್ದೆನೆಂದು ನಿನಗೆ ಹೇಗೆ ತಿಳಿಯಿತು ?

ಕ್ರಾಗ್‌ಸ್ಟಾಡ್:—ಮೊಟ್ಟಮೊದಲು ಅದನ್ನೇ ನಾವೆಲ್ಲಾ ಯೋಚಿಸುವುದು. ನಾನು ಹಾಗೆಯೇ ಮಾಡಿದೆ ಆದರೆ ಧೈರ್ಯ ಬರಲಿಲ್ಲ.

ನೋರಾ :—(ಮೆತ್ತಗೆ) ನನಗೂ ಅಷ್ಟೆ.

ಕ್ರಾಗ್‌ಸ್ಟಾಡ್ :—(ನಿಶ್ಚಿಂತೆಯಿಂದ) ಹೌದು ಹಾಗೆ ತಾನೆ ಅದು ! ಅಲ್ಲವೆ ? ನಿನಗೂ ಧೈರ್ಯವಿಲ್ಲ ?

ನೋರಾ:—ಇಲ್ಲ. ಧೈರ್ಯವಿಲ್ಲ! ಧೈರ್ಯವಿಲ್ಲ!

ಕ್ರಾಗ್‌ಸ್ಟಾಡ್:—ಅಲ್ಲದೆ ಅದು ಹುಚ್ಚುಕೆಲಸವಾಗುತ್ತಿತ್ತು. ಮನೆಯಲ್ಲಿ ಒಂದು ಸಲ ಬಿರುಗಾಳಿ ಬಡಿತ ಇಳಿಯಿತು ಅಂದರೆ—ನನ್ನ ಜೋಬಿನಲ್ಲಿ ನಿನ್ನ ಗಂಡನಿಗೆ ಒಂದು ಕಾಗದವನ್ನು ತಂದಿದೇನೆ.

ನೋರಾ:—ಅದರಲ್ಲಿ ಎಲ್ಲವನ್ನೂ ಬರೆದಿದ್ದೀಯಾ?

ಕ್ರಾಗ್‌ಸ್ಟಾಡ್:—ನನ್ನ ಕೈಲಾದಮಟ್ಟಿಗೂ ನಿನಗೆ ಅನುಕೂಲವಾಗುವಂತೆ.

ನೋರಾ:—(ಜಾಗ್ರತೆಯಾಗಿ) ಕಾಗದ ಅವನಿಗೆ ತಲಪಕೂಡದು. ಹರಿದು ಹಾಕಿಬಿಡು. ಹೇಗಾದರೂ ಮಾಡಿ ಹಣವನ್ನು ಒದಗಿಸುತ್ತೇನೆ.

ಕ್ರಾಗ್‌ಸ್ಟಾಡ್:—ಕ್ಷಮಿಸು ಮಿಸೆಸ್ ಹೆಲ್ಮರ್. ಇದೇ ತಾನೆ ನಿನಗೆ ಹೇಳಲಿಲ್ಲವೆ—

ನೋರಾ:—ನಾನು ನಿನಗೆ ಕೊಡುವ ಸಾಲದ ಯೋಚನೆ ಮಾಡುತ್ತಿಲ್ಲ. ಹೇಳು ನನ್ನೊಡನೆ ನನ್ನ ಗಂಡನನ್ನು ಎಷ್ಟು ದುಡ್ಡು ಕೇಳುತ್ತಿದೀಯೆ? ಆ ಹಣವನ್ನು ನಾನೇ ಕೊಡುತ್ತೇನೆ.

ಕ್ರಾಗ್‌ಸ್ಟಾಡ್:—ನಿನ್ನ ಗಂಡನನ್ನು ಒಂದುಕಾಸೂ ಕೇಳುತ್ತಿಲ್ಲ!

ನೋರಾ:—ಹಾಗಾದರೆ ನಿನಗೇನು ಬೇಕು?

ಕ್ರಾಗ್‌ಸ್ಟಾಡ್:—ಹೇಳುತ್ತೇನೆ ಕೇಳು. ಮಿಸೆಸ್ ಹೆಲ್ಮರ್, ಸಮಾಜದಲ್ಲಿ ಪೂರ್ವದಂತೆ ನಾನು ಗೌರವಸ್ಥನಾಗಿರಬೇಕು; ಎಲ್ಲರಂತೆ ಬಾಳಬೇಕು. ಇದಕ್ಕೆ ನಿನ್ನ ಗಂಡನ ಸಹಾಯಬೇಕು. ಕಳೆದ ಒಂದೂವರೆ ವರ್ಷದಿಂದ ನಾನು ಯಾವ ಗರ್ಹ್ಯವಾದ ಕೆಲಸವನ್ನೂ ಮಾಡಿಲ್ಲ; ಮತ್ತೂ ಬಹಳಕಷ್ಟತರವಾದ ಇಕ್ಕಟ್ಟಾದ ಸ್ಥಿತಿಯಲ್ಲಿ ಸಿಕ್ಕಿಕೊಂಡು ತಲೆತಗ್ಗಿಸಿಕೊಂಡು ಒದ್ದಾಡುತ್ತಿದೇನೆ. ಮೆಟ್ಟಿಲು ಮೆಟ್ಟಲಾಗಿ ಮೇಲೆ ಹತ್ತಿ ಬರಲು ಸಹನೆಯನ್ನೂ ತೃಪ್ತಿಯನ್ನೂ ತಾಳಿದ್ದೇನೆ. ಹೀಗಿರುವಾಗ್ಗೆ ನನಗೆ ಬರತರ್ಫು ಆಗಿಹೋಗಿದೆ. ಹೀಗಿರುವಲ್ಲಿ ಪೂರ್ವ

ಸ್ಥಿತಿಯನ್ನು ಮಾತ್ರ ಗೆಲ್ಲುವುದು ನನಗೆ ಸಾಕಾಗದು. ನಾನು ಇನ್ನೂ ಮೇಲಕ್ಕೆ ಹತ್ತಬೇಕು. ಬ್ಯಾಂಕಿಗೆ ವಾಪಸ್ಸು ಹೋಗಬೇಕು. ಅಲ್ಲದೆ ಮೊದಲಿಗಿಂತಲೂ ದೊಡ್ಡ ಉದ್ಯೋಗದಲ್ಲಿ ನಿನ್ನ ಗಂಡನು ಸರಿಯಾದ ಸ್ಥಳವೊಂದನ್ನು ನನಗೆ ಕಲ್ಪಿಸಿ ಕೊಡಬೇಕು.

ನೋರಾ :—ಅವನೆಂದಿಗೂ ಹಾಗೆ ಮಾಡುವುದಿಲ್ಲ!

ಕ್ರಾಗ್‌ಸ್ಟಾಡ್ :—ಮಾಡುತ್ತಾನೆ. ಅವನು ನನಗೆ ಗೊತ್ತು? ಎದುರು ಮಾತನ್ನಾಡಲು ಅವನಿಗೆ ಎದೆ ಇರುವುದಿಲ್ಲ. ಪುನಃ ಅವನ ಜೊತೆಯಲ್ಲಿ ಕೆಲಸಮಾಡಲು ಪ್ರಾರಂಭಿಸಿದ ಒಡನೆ ನಿನಗೆ ತಿಳಿಯುವುದು. ಒಂದು ವರ್ಷದೊಳಗಾಗಿ ಅವನ ಬಲಭುಜವಾಗಿರುತ್ತೇನೆ. ಅನಂತರ ಬ್ಯಾಂಕಿನ ಕಾರ್ಯವನ್ನು ನಿರ್ವಹಿಸತಕ್ಕವನು ನಿಲ್ಸ್ ಕ್ರಾಗ್‌ಸ್ಟಾಡ್, ತೊರ್ವಾಲ್ಡ್ ಹೆಲ್ಮರನಲ್ಲ!

ನೋರಾ :—ಅದನ್ನು ಕಣ್ಣಾರೆ ನೀನೆಂದಿಗೂ ನೋಡುವುದಿಲ್ಲ.

ಕ್ರಾಗ್‌ಸ್ಟಾಡ್ :—ಹಾಗಾದರೆ ನೀನು—?

ನೋರಾ:—ಹಾಗೆ ಮಾಡಲು ನನಗೆ ಧೈರ್ಯಬಂದಿದೆ.

ಕ್ರಾಗ್‌ಸ್ಟಾಡ್:—ಓ ನನ್ನನ್ನು ಹೆದರಿಸುತ್ತೀಯಾ? ಲೋಲಾಪ್ತಿಯಲ್ಲಿ ಬೆಳೆದ ನಾಜೋಕಾದ ದೊರೆಸಾನಿ ನೀನು—?

ನೋರಾ:—ನೋಡುವೆಯಂತೆ—ನೋಡುವೆಯಂತೆ.

ಕ್ರಾಗ್‌ಸ್ಟಾಡ್:— ಎಲ್ಲಿ ನೊಡುವುದು? ಮಂಜಿನಗಡ್ಡೆಯ ಕೆಳಗೆ ಅಲ್ಲವೆ? ಛಳಿಯಿಂದ ಕೊರೆಯುತ್ತಿರುವ ಕಪ್ಪಗೆ ಕಾಣುತ್ತಿರುವ ನೀರಿನ ಕೆಳಗೆ? ಆ ಮೇಲೆ ವಸಂತಕಾಲಪ್ರಾಪ್ತಿಯಾದಾಗ್ಗೆ ತಲೆಯ ಕೂದಲೆಲ್ಲಾ ಉದುರಿ ಹೋಗಿ ಗುರ್ತಿಸಲಾರದ—ನೋಡಲಸಹ್ಯವಾದ ನಿನ್ನ ಶವವು ಮೇಲಕ್ಕೆ ತೇಲಿ ಬರುವುದು. ಅದನ್ನಲ್ಲವೇ ನೋಡುವುದು?

ನೋರಾ:—ನನ್ನನ್ನೇನೋ ಈಗ ನೀನು ಹೆದರಿಸಲಾರೆ.

ಕ್ರಾಗ್‌ಸ್ಟಾಡ್:—ನೀನೂ ನನ್ನನ್ನು ಹೆದರಿಸಲಾರೆ. ಸಾಧಾರಣ

ವಾಗಿ ಜನಗಳು ಹಾಗೆ ಪ್ರವರ್ತಿಸುವುದಿಲ್ಲ, ಮಿಸೆಸ್ ಹೆಲ್ಮರ್. ಅಲ್ಲದೆ ಅದರಿಂದೇನು ಉಪಯೋಗ? ಅವನೇನೋ ನನ್ನ ಕೈಲಿ ಸಿಕ್ಕೇ ಸಿಕ್ಕಿಕೊಳ್ಳುತ್ತಾನೆ.

ನೋರಾ:—ಆ ಮೇಲೆ? ಅಂದರೆ ನಾನಿಲ್ಲದೆ ಇರುವಾಗ್ಗೆ—?

ಕ್ರಾಗ್‌ಸ್ಟಾಡ್:—ನಿನ್ನ ಮಾನ, ನಿನ್ನ ಹೆಸರು, ನನ್ನ ಕೈಯ್ಯಲ್ಲಿವೆ ಎಂಬುದದನ್ನು ಮರೆತೆಯಾ? (ಮಾತಾಡದೆ ನೋರಾ ಅವನನ್ನು ನೋಡುತ್ತಾ ನಿಂತಿರುವಳು.) ಸರಿ. ನಿನಗೆ ಹುಷಾರಿ ಕೊಟ್ಟಿದ್ದೇನೆ. ಬುದ್ಧಿಯಿಲ್ಲದೆ ಹುಚ್ಚಿಯಂತೆ ಏನಾದರೂ ಮಾಡೀಯೆ. ಹೆಲ್ಮರನು ನನ್ನ ಕಾಗದವನ್ನು ಓದಿದನಂತರ ನನಗೊಂದು ಉತ್ತರವನ್ನು ಹೇಳಿಕಳುಹಿಸುವನೆಂದು ನಂಬಿದ್ದೇನೆ. ನಿನ್ನ ಗಂಡನೇ ನನ್ನನ್ನು ಪುನಃ ಈ ಮಾರ್ಗಕ್ಕೆ ಎಳೆದವನೆಂದು ಮನಸ್ಸಿನಲ್ಲಿಡು. ಅವನನ್ನಿದಕ್ಕೆಂದಿಗೂ ಮನ್ನಿಸಲಾರೆ. ಹೋಗಿಬರುವೆ. ಮಿಸೆಸ್ ಹೆಲ್ಮರ್ (ಹಜಾರದ ಕಡೆಯಿಂದ ಹೊರಕ್ಕೆ ಹೋಗುವನು.)

ನೋರಾ:—(ಹಜಾರದ ಬಾಗಿಲ ಹತ್ತಿರ ಹೋಗಿ ಕದವನ್ನು ಸ್ವಲ್ಪ ತೆಗೆದು ಇಣಿಕಿ ನೋಡುವಳು) ಹೋಗುತ್ತಿದಾನೆ. ಕಾಗದವನ್ನು ಪೆಟ್ಟಿಗೆಯೊಳಕ್ಕೆ ಹಾಕುವಂತಿಲ್ಲ. ಓಹೋ-ಇಲ್ಲ-ಇಲ್ಲ. ಹಾಗೆಂದಿಗಾದೀತು? (ಕದವನ್ನು ಕೊಂಚ ಕೊಂಚವಾಗಿ ತೆಗೆಯುತ್ತಾ) ಅದೇನದು? ಹೊರಗೆ ನಿಂತುಕೊಂಡಿದ್ದಾನೆ. ಕೆಳಗೆ ಹೋಗುತ್ತಾ ಇಲ್ಲ. ಏನಾದರೂ ಅನುಮಾನಿಸುತ್ತಿದ್ದಾನೆಯೋ?— ಒಂದು ವೇಳೆ ಅವನು—(ಪೆಟ್ಟಿಗೆಯೊಳಕ್ಕೆ ಒಂದು ಕಾಗದವು ಬೀಳುವುದು. ಆ ಮೇಲೆ ಕ್ರಾಗ್‌ಸ್ಟಾಡಿನ ಕಾಲು ನಡಿಗೆಯ ಶಬ್ದವು ಕೇಳಿ-ಸ್ವಲ್ಪ-ಸ್ವಲ್ಪ ಕಡಮೆಯಾಗಿ ಕೊನೆಗೆ ಕೇಳುವುದೇ ಇಲ್ಲ. ಅವನು ಮೆಟ್ಟಿಲಿಳಿದು ಕೆಳಗೆ ಹೋಗುವನು. ನೋರಾ ಉಸಿರು ಬಿಗಿಹಿಡಿದು ಕಿರಿಚಿಕೊಂಡು ಮತ್ತೆ ಕುರ್ಚಿಯ ಕಡೆ ಓಡಿಬರುವಳು. ಸ್ವಲ್ಪಕಾಲ ಸುಮ್ಮನಿರುವಳು.)

ನೋರಾ:—ಕಾಗದದ ಪೆಟ್ಟಿಗೆಯೊಳಗೆ (ಹಜಾರದ ಬಾಗಿಲಿನಿಂದ ಇಳ್ಳಿ ಯಂತೆ ಮೆಲ್ಲನೆ ಹೋಗುವಳು) ಅಗೋ ಅಲ್ಲಿದೆ ಅದು! ತೊರ್ವಾಲ್ಡ್-ತೊರ್ವಾಲ್ಡ್-ಇನ್ನು ನಮ್ಮ ಆಶೆಯೆಲ್ಲಾ ತೀರಿತು (ಉಡುಪನ್ನು ಕೈಲಿಹಿಡಿದು ಎಡಗಡೆ ಚಿಕ್ಕಮನೆಯಿಂದ ಮಿಸೆಸ್ ಲಿಂಡ್ ಹೊರಗೆ ಬರುವಳು)

ಲಿಂಡ್:—ಅಗೋ ನೋಡು. ಇನ್ನು ದುರಸ್ತು ಮಾಡುವುದು ನನಗೇನೂ ತೋರುವುದಿಲ್ಲ. ಹಾಕಿಕೊಂಡು ಸರಿಯಾಗಿದೆಯೋ ಇಲ್ಲವೋ ನೋಡು.

ನೋರಾ:—(ಗಂಟಲೊಡೆದ ದನಿಯಿಂದ) ಕ್ರಿಸ್ಟೀನ್ ಇಲ್ಲಿ ಬಾ.

ಲಿಂಡ್:—(ಹುತ್ತಿ ಕುರ್ಚಿಯಮೇಲೆ ಉಡುಪನ್ನು ಎಸೆದು) ಯಾಕೆ ಸ್ವಸ್ಥವಾಗಿದ್ದೀಯೋ ಇಲ್ಲವೊ? ಏನೋ ಕಳವಳ ಪಡುತ್ತಿರುವಂತೆ ಕಾಣುತ್ತೀಯಲ್ಲ?

ನೋರಾ:—ಬಾ ಇಲ್ಲಿ. ಆ ಕಾಗದ ನಿನಗೆ ಕಾಣುತ್ತದೆಯೆ? ಅಲ್ಲಿ ನೋಡು ಗಾಜಿನೊಳಗೆ ಕಾಣುತ್ತೆ ಟಪಾಲು ಪೆಟ್ಟಿಗೆಯಲ್ಲಿ.

ಲಿಂಡ್:—ಹೌದು, ಕಾಣುತ್ತೆ.

ನೋರಾ:—ಆ ಕಾಗದವನ್ನು ಬರೆದವನು ಕ್ರಾಗ್‌ಸ್ಟಾಡ್.

ಲಿಂಡ್:—ನೋರಾ, ಹಾಗಾದರೆ ನಿನಗೆ ಸಾಲವನ್ನು ಕೊಟ್ಟವನು ಅವನೆ?

ನೋರಾ:—ಇನ್ನು ಎಲ್ಲಾ ತೊರ್ವಾಲ್ಡನಿಗೆ ಗೊತ್ತಾಗಿ ಹೋಗುತ್ತೆ.

ಲಿಂಡ್:—ನನ್ನ ಮಾತು ಕೇಳು. ನಿನ್ನ ಗಂಡನಿಗೆ ತಿಳಿಯುವುದು ಇಬ್ಬರಿಗೂ ಒಳ್ಳೆಯದು.

ನೋರಾ:—ನಿನಗೆ ಎಲ್ಲವೂ ಚೆನ್ನಾಗಿ ಗೊತ್ತಿಲ್ಲ. ನಾನು ಪತ್ರಕ್ಕೆ ಒಂದು ಕಳ್ಳರುಜು ಹಾಕಿದೆ.

ಲಿಂಡ್:—ಅಯ್ಯೋ ದೇವರೆ!

ನೋರಾ:—ನಾನು ಹೇಳುವುದೊಂದೇ ಮಾತು—ನೀನು ನನ್ನ ಸಾಕ್ಷಿ ಕ್ರಿಸ್ಟೀನ್.

ಲಿಂಡ್:—ನಿನ್ನ ಸಾಕ್ಷಿ? ಅರ್ಥವೇನದಕ್ಕೆ? ನಾನೇನು ಮಾಡ—

ನೋರಾ:—ನನಗೇನಾದರೂ ಹುಚ್ಚು ಹಿಡಿದರೆ—ಒಂದು ವೇಳೆ ಸುಲಭವಾಗಿ ಹಾಗಾದರೂ ಆಗಬಹುದು—

ಲಿಂಡ್:—ನೋರಾ!

ನೋರಾ:—ಅಥವಾ ನನಗೆ ಮತ್ತೇನಾದರೂ ಸಂಭವಿಸಿದರೆ,—ನಾನು ಇಲ್ಲಿರಲಾಗದಂಥಾದ್ದೇನಾದರೂ ಸಂಭವಿಸಿದರೆ—

ಲಿಂಡ್:—ನೋರಾ-ನೋರಾ ನಿನಗೆ ಬುದ್ಧಿ ಸ್ವಾಧೀನವಿಲ್ಲ.

ನೋರಾ:—ಮತ್ತು ತಪ್ಪನ್ನೆಲ್ಲಾ ತಾನು ಹೊತ್ತುಕೊಳ್ಳಲು ಯಾವನಾದರೂ ಸಿದ್ಧನಾಗಿದ್ದರೆ, ಜವಾಬುದಾರಿಯನ್ನು ವಹಿಸಿಕೊಳ್ಳುವನಾದರೆ—ತಿಳಿಯಿತೆ?

ಲಿಂಡ್:—ತಿಳಿಯಿತು, ಆದರೆ ಇದೆಲ್ಲಾ ಏನು ಊಹೆಗಳು?

ನೋರಾ:—ಆಗ್ಗೆ ಅವನು ಹೇಳುವುದು ನಿಜವಲ್ಲವೆಂದು ನೀನು ನನ್ನ ಪರವಾಗಿ ಸಾಕ್ಷಿಯಾಗಿರಬೇಕು. ನನ್ನ ಬುದ್ಧಿಯೇನೂ ಸ್ವಾಧೀನದಲ್ಲಿಲ್ಲದೇ ಇಲ್ಲ. ನನ್ನ ಬುದ್ಧಿ ನನ್ನ ಹತೋಟಿಯಲ್ಲಿದೆ. ಈ ವಿಷಯ ಮತ್ತಾರಿಗೂ ತಿಳಿದಿಲ್ಲ. ಆ ಕೆಲಸವನ್ನು ನಾನೇ—ನಾನೊಬ್ಬಳೇ ಮಾಡಿದ್ದು—ಅದು ಜ್ಞಾಪಕವಿರಲಿ.

ಲಿಂಡ್:—ನೆನಪಿನಲ್ಲಿಡುತ್ತೇನೆ ಆಗಲಿ! ಆದರೆ ನನಗೆ ಯಾವದೂ ಅರ್ಥವೇ ಆಗುವುದಿಲ್ಲ.

ನೋರಾ:—ನಿನಗೆ ಹೇಗೆ ಅರ್ಥವಾಗಬೇಕು? ಈಗ ಅದ್ಭುತವಾದ ಘಟನೆಯೊಂದಾಗುವುದು.

ಲಿಂಡ್:—ಅದ್ಭುತವಾದ ಘಟನೆ?

ನೋರಾ:—ಹೌದು. ಅದ್ಭುತವಾದ ಘಟನೆ! ಆದರೆ ಅದು ಅತಿ ಭಯಂಕರವಾದದ್ದು; ಈ ಲೋಕವನ್ನೇ ಕೊಟ್ಟರೂ ಅದು **ಖಂಡಿತವಾಗಿಯೂ ಆಗಬಾರದು.**

ಲಿಂಡ್:—ನಾನು ತಕ್ಷಣವೇ ಹೋಗಿ ಕ್ರಾಗ್‌ಸ್ಟಾಡನನ್ನು ಕಾಣುವೆನು.

ನೋರಾ:—ಅವನ ಹತ್ತಿರ ಹೋಗಬೇಡ. ಏನಾದರೂ ಕೆಡಕು ಮಾಡುತ್ತಾನೆ.

ಲಿಂಡ್:—ಒಂದಾನೊಂದು ಕಾಲದಲ್ಲಿ ನನಗೋಸ್ಕರ ಏನು ಬೇಕಾದರೂ ಮಾಡಲು ಸಿದ್ಧನಾಗಿದ್ದನು.

ನೋರಾ:—ಅವನೆ?

ಲಿಂಡ್:—ಅವನೆಲ್ಲಿ ವಾಸವಾಗಿದ್ದಾನೆ?

ನೋರಾ:—ನನಗೆ ಹೇಗೆ ಗೊತ್ತು—? ಗೊತ್ತು! (ಜೋಬಿನಲ್ಲಿ ಹುಡುಕುತ್ತಾ) ಇಗೋ ಈ ಕಾಗದದಮೇಲೆ ಅವನ ಮನೆ ವಿಳಾಸ ಬರೆದಿದೆ. ಆದರೆ ಆ ಕಾಗದ! ಟಪಾಲು ಪೆಟ್ಟಿಗೆಯೊಳಗಿರುವ ಕಾಗದ—!

ಹೆಲ್ಮರ್:—(ಬಾಗಿಲನ್ನು ತಟ್ಟಿ ತನ್ನ ಚಿಕ್ಕಮನೆಯಿಂದ ಕೂಗುತ್ತಾ) ನೋರಾ!

ನೋರಾ:—(ವ್ಯಾಕುಲದಿಂದ ಕೂಗುತ್ತಾ) ಓ ಅದೇನದು? ನಿನಗೇನು ಬೇಕು ಹೆಲ್ಮರ್?

ಹೆಲ್ಮರ್:—ಹೆದರಿಕೊಳ್ಳಬೇಡ, ನಾವೇನೂ ಒಳಗೆ ಬರುವುದಿಲ್ಲ. ಬಾಗಿಲು ಚಿಲಕ ಹಾಕಿಕೊಂಡಿದ್ದೀಯೆ. ಬಟ್ಟೆ ಹಾಕಿಕೊಳ್ಳುತ್ತಿದ್ದೀಯೇನು?

ನೋರಾ:—ಹೌದು, ಅದೇ ಕೆಲಸ, ತೊರ್ವಾಲ್ಡ್ ನಾನು ಎಷ್ಟು ಚಲುವಾಗಿದ್ದೇನೆಯೋ?

ಲಿಂಡ್:—(ವಿಳಾಸವನ್ನು ಓದಿಕೊಂಡು) ಇದೇ ಬೀದಿ ಮೂಲೆ ಮನೆಯಲ್ಲಿ ವಾಸವಾಗಿದ್ದಾನೆ.

ನೋರಾ:—ಹೌದು, ಅದರ ಉಪಯೋಗವೇನು? ಎಲ್ಲವೂ ನಿರಾಶೆಯಾಯಿತು. ಟಪಾಲು ಪೆಟ್ಟಿಗೆಯಲ್ಲಿ ಆ ಕಾಗದ ಇದ್ದೇಇದೆ.

ಲಿಂಡ್:—ಬೀಗದ ಕೈ ನಿನ್ನ ಗಂಡನ ಹತ್ತಿರ ಇದೆಯೆ?

ನೋರಾ:—ಹೌದು; ಯಾವಾಗಲೂ!

ಲಿಂಡ್:—ಕ್ರಾಗ್‌ಸ್ಟಾಡ್ ಏನಾದರೂ ಒಂದು ನೆವದಿಂದ ಆ ಕಾಗದ

ವನ್ನು ಓದುವುದಕ್ಕೆ ಮುಂಚಿತವಾಗಿ ವಾಪಸ್ಸು ತೆಗೆದು ಕೊಳ್ಳಬೇಕು.

ನೋರಾ:—ಈ ಹೊತ್ತಿನಲ್ಲೇ ಸಾಧಾರಣವಾಗಿ ತೊರ್ವ್ವಾಲ್ಡನು ಟಪಾ ಲುಪೆಟ್ಟಿಗೆಯನ್ನು ತೆರೆಯುವ ಪದ್ಧತಿ—

ಲಿಂಡ್:—ನೀನೇನಾದರೂ ಮಾಡಿ ಅವನನ್ನು ಸ್ವಲ್ಪ ತಡೆಯಬೇಕು. ಈಗ ಅವನ ಹತ್ತಿರ ಹೋಗು. ನಾನು ಕೈಲಾದಷ್ಟು ಜಾಗ್ರ ತೆಯಾಗಿ ವಾಪಸ್ಸು ಬರುತ್ತೇನೆ. (ತ್ವರೆಯಿಂದ ಹೋಗುವಳು)

ಹೆಲ್ಮರ್:—(ಚಿಕ್ಕಮನೆಯೊಳಗಿನಿಂದ) ಏನು? ನನ್ನ ಚಿಕ್ಕಮನೆ ಯೊಳಕ್ಕೆ ನಾನು ಬರಲು ಈಗಲಾದರೂ ಅಪ್ಪಣೆಯುಂಟೋ? ಬಾ. ರ್‍ಯಾಂಕ್ ಈಗ ನೋಡುವೆ—(ಬಾಗಿಲಲ್ಲಿ ಹಾಗೆಯೇ ನಿಂತು) ಆದರೆ ಇದೇನಿದು?

ನೋರಾ:—ಯಾವುದು? ಏನುಪ್ರಿಯ?

ಹೆಲ್ಮರ್:—ಅತ್ಯಂತ ಮನೋಹರವಾದ ರೂಪಾಂತರವನ್ನು ನಾನು ಕಾಣುತ್ತೇನೆಂದು ಡಾಕ್ಟರ್ ರ್‍ಯಾಂಕ್ ಹೇಳಿದನಲ್ಲ?

ರ್‍ಯಾಂಕ್:—(ಬಾಗಿಲಬಳಿ ನಿಂತು) ನಾನೇನೋ ಹಾಗೆಯೇ ತಿಳಿದು ಕೊಂಡಿದ್ದೆ. ಆದರೆ ಅದು ನನ್ನ ತಪ್ಪು ತಿಳುವಳಿಕೆಯೆಂದು ಕಾಣುತ್ತೆ.

ನೋರಾ:—ನಾಳೆಯ ತನಕ ಹೊಸ ಉಡುಪಿನಲ್ಲಿ ನನ್ನನ್ನು ನೋಡಿ ಮೆಚ್ಚಿ ಆಶ್ಚರ್ಯಪಡಲು ಅವಕಾಶವಿಲ್ಲ.

ಹೆಲ್ಮರ್:—ಆದರೆ ಯಾಕೆ ನೋರಾ! ನೀನು ಬಾಡಿ ಬಳಲಿದವಳಂತೆ ಕಾಣುತ್ತೀಯೆ? ಅತಿಯಾಗಿ ನರ್ತನವನ್ನೇನಾದರೂ ಅಭ್ಯಾಸ ಮಾಡುತ್ತಿದ್ದೀಯಾ?

ನೋರಾ:—ಇಲ್ಲ. ನಾನು ಅಭ್ಯಾಸವನ್ನೇ ಮಾಡಿಲ್ಲ!

ಹೆಲ್ಮರ್:—ನೀನು ಮಾಡಬೇಕಾಗಿದೆಯಲ್ಲವೆ?

ನೋರಾ:—ಹೌದು, ಮಾಡುತ್ತೇನೆ ತೊರ್ವ್ವಾಲ್ಡ್. ಆದರೆ ನಿನ್ನ ಸಹಾಯವಿಲ್ಲದೆ ನಾನೇನೂ ಮಾಡಲಾರೆ ನನಗೆಲ್ಲವೂ ಸುತ ರಾಂ ಮರೆತುಹೋಗಿಬಿಟ್ಟಿದೆ.

ಹೆಲ್ಮರ್:—ಅದನ್ನೇನಂತೆ ? ಜಾಗ್ರತೆಯಾಗಿ ಸರಿಪಡಿಸಬಹುದು.

ನೋರಾ:—ಹೌದು. ಆದರೆ ನೀನು ಸಹಾಯಮಾಡು ತೊರ್ವಾಲ್ಡ್. ಮಾಡುತ್ತೇನೆಂದು ಮಾತು ಕೊಡು. ನನಗೆ ಯಾಕೋ ಧೈರ್ಯವೇ ಇಲ್ಲ. ಜನಗಳೆಲ್ಲರೂ—!! ಈ ದಿನ ಸಾಯಂ ಕಾಲವನ್ನೆಲ್ಲಾ ನನಗೆ ನೀನು ಕೊಡಬೇಕು. ಒಂದು ಕ್ಷಣ ವಾದರೂ ಬೇರೆ ಕೆಲಸದ ಯೋಚನೆ ಇರಕೂಡದು. ಲೇಖನಿ ಯನ್ನು ಕೈಲಿ ಮುಟ್ಟಕೂಡದು. ನನಗೆ ಮಾತುಕೊಡು ಪ್ರಿಯ ತೊರ್ವಾಲ್ಡ್.

ಹೆಲ್ಮರ್:—ಮಾತುಕೊಡುತ್ತೇನೆ. ಅಯ್ಯೋ ದಿಕ್ಕಿಲ್ಲದ ಹೆಣ್ಣೆ, ಖಂಡಿತವಾಗಿಯೂ ಸಂಪೂರ್ಣವಾಗಿ ಈ ದಿನ ಸಾಯಂಕಾಲ ವನ್ನೆಲ್ಲಾ ನಿನಗೆ ಒಪ್ಪಿಸುತ್ತೇನೆ. ಆಹಾ-ಜ್ಞಾಪಕಕ್ಕೆ ಬಂತು ಮೊದಲು ಸ್ವಲ್ಪ—(ಹಜಾರದ ಬಾಗಿಲಕಡೆ ಹೋಗುವನು.)

ನೋರಾ:—ಅಲ್ಲೇನು ಕೆಲಸ ನಿನಗೆ ?

ಹೆಲ್ಮರ್:—ಕಾಗದಗಳೇನಾದರೂ ಇವೆಯೆ ನೋಡುತ್ತೇನೆ.

ನೋರಾ:—ಬೇಡ-ಬೇಡ-ತೊರ್ವಾಲ್ಡ್ ನೀನು ನೋಡಕೂಡದು.

ಹೆಲ್ಮರ್:—ಯಾಕೆ ನೋಡಕೂಡದು ?

ನೋರಾ:—ತೊರ್ವಾಲ್ಡ್ ದಯವಿಟ್ಟು ಬೇಡ. ಅಲ್ಲಿ ಏನೂ ಇಲ್ಲ.

ಹೆಲ್ಮರ್:—ಸುಮ್ಮನೆ ನೋಡಿ ಬರುತ್ತೇನೆ. (ಟಪಾಲು ಪೆಟ್ಟಗೆಯ ಕಡೆ ಹೋಗುತ್ತಾನೆ. ನೋರಾ ಪಿಯಾನೋ ಮುಂದೆ ಕುಳಿತು ಟರ್ಾಟೆಲ್ಲಾ ನರ್ತನ ಸಂಬಂಧವಾದ ಗಾನದ ಪಲ್ಲವಿಯನ್ನು ಬಾರಿಸುವಳು. ಹೆಲ್ಮರ್ ಬಾಗಿಲ ಬಳಿಯಲ್ಲೇ ನಿಲ್ಲುವನು.) ಆಹಾ !

ನೋರಾ:—ಈಗ ನಿನ್ನೊಡನೆ ಅಭ್ಯಾಸ ಮಾಡದಿದ್ದರೆ ನಾಳೆ ನಾನು ನರ್ತನವನ್ನು ಮಾಡಲಾಗುವುದೇ ಇಲ್ಲ.

ಹೆಲ್ಮರ್:—(ಅವಳ ಹತ್ತಿರ ಹೋಗಿ) ಅದು ಯಾಕೆ ಅಷ್ಟು ಸಂಶಯ ಪಡುತ್ತೀಯೆ ಪ್ರಿಯೆ ?

ನೋರಾ:—ನನಗೇನೋ ಮನಸ್ಸಿನಲ್ಲಿ ದಿಗಿಲು ಇದ್ದೇ ಇದೆ. ಈಕ್ಷಣವೇ ಅಭ್ಯಾಸಮಾಡುತ್ತೇನೆ. ಊಟಕ್ಕೆ ಮುಂಚಿತವಾಗಿ ಸ್ವಲ್ಪ ಅವಕಾಶವಿದೆ. ಪ್ರಿಯ ತೊರ್ವಾಲ್ಡ್ ನೀನು ಇಲ್ಲಿ ಕುಳಿತು ಪಿಯಾನೋವನ್ನು ಬಾರಿಸು. ಬಾರಿಸುತ್ತಾ ನರ್ತನದ ನ್ಯೂನತೆಗಳನ್ನು ಪರೀಕ್ಷಿಸಿ ನನ್ನನ್ನು ತಿದ್ದು.

ಹೆಲ್ಮರ್:—ನಿನ್ನ ಇಚ್ಛೆಯೇ ನನ್ನ ಆನಂದ; ಹಾಗೆಯೇ ಆಗಲಿ. (ಪಿಯಾನೋ ಮುಂದೆ ಕುಳಿತುಕೊಳ್ಳುವನು)

ನೋರಾ:—(ಪೆಟ್ಟಿಗೆಯೊಳಗಿನಿಂದ ಒಂದು ಕಂಜೀರವನ್ನು ತೆಗೆಯುವಳು. ನಾನಾ ಬಣ್ಣವುಳ್ಳ ಶಾಲುವೊಂದನ್ನು ತೆಗೆದು ಮೈಯಿಗೆ ಸುತ್ತಿಕೊಳ್ಳುವಳು. ಆ ಮೇಲೆ ರಂಗಭೂಮಿಯ ಮುಂಭಾಗಕ್ಕೆ ಚಿಮ್ಮಿ ಹಾರಿ ಬಂದು ತೂಗುವಳು) ವಾದ್ಯವನ್ನು ಬಾರಿಸು. ನಿನ್ನ ಮುಂದೆ ನರ್ತನವನ್ನು ಮಾಡುತ್ತೇನೆ! (ಹೆಲ್ಮರ್ ವಾದ್ಯವನ್ನು ಬಾರಿಸುವನು-ನೋರಾ ನರ್ತನಮಾಡುವಳು. ಪಿಯಾನೋ ಪಕ್ಕದಲ್ಲಿ ಹೆಲ್ಮರನ ಹಿಂಭಾಗದಲ್ಲಿ ನಿಂತುಕೊಂಡು ಡಾಕ್ಟರ್ ರ್ಯಾಂಕ್ ಎಲ್ಲವನ್ನೂ ನೋಡುತ್ತಿರುವನು.)

ಹೆಲ್ಮರ್:—(ಬಾರಿಸುತ್ತಾ) ನಿಧಾನ-ನಿಧಾನವಾಗಿ!

ನೋರಾ:—ನನ್ನ ಕೈಯಲ್ಲಿ ಬೇರೆ ತರಹ ಆಗುವುದಿಲ್ಲ.

ಹೆಲ್ಮರ್:—ಅಷ್ಟು ವೇಗವಾಗಿ ಬೇಡ ನೋರಾ!

ನೋರಾ:—ಹಾಗೆಯೆ-ಹಾಗೆಯೆ!

ಹೆಲ್ಮರ್:—(ಪಿಯಾನೋ ಬಾರಿಸುವುದನ್ನು ನಿಲ್ಲಿಸಿ) ಅಲ್ಲ-ಅಲ್ಲ-ಅದು ಸ್ವಲ್ಪವೂ ಸರಿಯಲ್ಲ.

ನೋರಾ:—(ನಗುತ್ತಾ ಮತ್ತು ಕಂಜೀರವನ್ನು ಬೀಸುತ್ತಾ) ನಾನು ಮೊದಲೇ ಹೇಳಲಿಲ್ಲವೆ?

ರ್ಯಾಂಕ್:—ನಾನು ಪಿಯಾನೋವನ್ನು ಬಾರಿಸುತ್ತೇನೆ.

ಹೆಲ್ಮರ್:—(ಎದ್ದು) ಆಗಲಿ, ನೀನು ಹಾಗೆ ಮಾಡು. ಅವಳನ್ನು ನಾನು ಸುಲಭವಾಗಿ ತಿದ್ದಬಹುದು. (ರ್ಯಾಂಕ್ ಪಿಯಾನೋ

ಟಾರಿಸುವನು. ನೋರಾ ಮತ್ತಷ್ಟು ವೇಗವಾಗಿ ತಾಳ ತಪ್ಪಿ ಕುಣಿಯುವಳು. ಹೆಲ್ಮರನು ಒಲೆಯ ಮುಂದೆ ಕುಳಿತು ಪ್ರತಿ ಕ್ಷಣವೂ ಅವಳನ್ನು ತಿದ್ದುತಿರುವನು. ಅವನನ್ನು ಗಮನಿಸದೆ ಮನಬಂದಂತೆ ನೋರಾ ಕುಣಿಯುತ್ತಲಿರುವಳು. ಅವಳ ತಲೆ ಕೂದಲು ಗಂಟು ಬಿಚ್ಚಿ ಭುಜದ ಮೇಲೆಲ್ಲಾ ಹರಡುವುದು. ಅದನ್ನೂ ಲೆಕ್ಕಿಸದೆ ನರ್ತನ ಮಾಡುತ್ತಿರುವಳು. ಮಿಸೆಸ್ ಲಿಂಡ್ ಪ್ರವೇಶ)

ಲಿಂಡ್:—(ಬಾಗಿಲಲ್ಲಿ ಸ್ತಬ್ಧಳಾಗಿ ನಿಂತುಕೊಂಡು) ಓಹೊ - - -

ನೋರಾ:—(ನರ್ತನ ಮಾಡುತ್ತಾ) ಕ್ರಿಸ್ಟೀ‌ನ್ ಎಷ್ಟು ತಮಾಷೆಯಾಗಿದೆಯೋ ?

ಹೆಲ್ಮರ್:—ಹೋಗುತ್ತಿರುವ ಪ್ರಾಣವನ್ನು ಉಳಿಸಿಕೊಳ್ಳುವುದಕ್ಕೋಸ್ಕರ ನರ್ತನ ಮಾಡುತ್ತಿರುವಂತೆ ಕಾಣುತ್ತೀಯೆ.

ನೋರಾ:—ಹಾಗೆಯೇ ಸರಿ.

ಹೆಲ್ಮರ್:—ನಿಲ್ಲಿಸು ರ್‍ಯಾಂಕ್. ಇದು ಶುದ್ಧ ಹುಚ್ಚು, ನಿಲ್ಲಿಸು. ನನ್ನ ಮಾತು ಕೇಳು. (ರ್‍ಯಾಂಕ್ ಪಿಯಾನೋವನ್ನು ನಿಲ್ಲಿಸುವನು. ನೋರಾ ಸುಮ್ಮನೆ ನಿಲ್ಲುವಳು. ಹೆಲ್ಮರ್ ಅವಳ ಹತ್ತಿರ ಹೋಗಿ) ಇದನ್ನು ನಾನು ನಂಬಲಾರೆ. ನಾನು ಹೇಳಿಕೊಟ್ಟಿದ್ದನ್ನೆಲ್ಲ ಮರೆತುಬಿಟ್ಟಿದ್ದೀಯೆ.

ನೋರಾ:—(ಕಂಜೀರವನ್ನು ಒಂದು ಕಡೆ ಎಸೆದುಬಿಟ್ಟು) ನೀನೇ ನೋಡು, ನಾನು ಮೊದಲೇ ಹೇಳಲಿಲ್ಲವೆ ?

ಹೆಲ್ಮರ್:—ನಿನಗೆ ಮೊದಲಿಂದ ಕೊನೆಯವರಿಗೂ ಅಭ್ಯಾಸ ಮಾಡಿಸಬೇಕು.

ನೋರಾ:—ಹೌದು, ಎಷ್ಟು ಸಹಾಯಬೇಕೋ ನೀನೇ ನೋಡು, ಕೊನೆಯ ನಿಮಿಷದ ತನಕ ನೀನು ನನಗೆ ಪಾಠಹೇಳಿ ಅಭ್ಯಾಸಮಾಡಿಸಬೇಕು. ಹಾಗೆ ಮಾಡುವೆನೆಂದು ನನಗೆ ಅಭಯವನ್ನು ಕೊಡು ತೊರ್‍ವಾಲ್ಡ್.

ಹೆಲ್ಮರ್:—ನನ್ನನ್ನು ನೆಚ್ಚಿರಬಹುದು, ನಾನು ಮಾತಿಗೆ ತಪ್ಪು ವುದಿಲ್ಲ.

ನೋರಾ:—ನನ್ನ ವಿನಾ ಮತ್ತೆ ಯಾವದನ್ನೂ ಮನಸ್ಸಿಗೆ ಹಚ್ಚಿ ಕೊಳ್ಳಲೇ ಕೂಡದು, ಈ ಹೊತ್ತು, ನಾಳೆ, ಒಂದು ಕಾಗದ ವನ್ನೂ ಒಡೆದು ನೋಡಕೂಡದು. ಟಪಾಲು ಪೆಟ್ಟಿಗೆಯ ಕಡೆಯೇ ಸುಳಿಯಕೂಡದು.

ಹೆಲ್ಮರ್:—ಆ ನೀಚನ ಅಂಜಿಕೆ ನಿನಗೆ ಇನ್ನೂ ಇದೆಯೆಂದು ಕಾಣುತ್ತೆ.

ನೋರಾ:—ಹೌದು ಇನ್ನೂ ಇದೆ.

ಹೆಲ್ಮರ್:—ನಿನ್ನ ತರಹವನ್ನು ನೋಡಿದರೆ ಟಪಾಲು ಪೆಟ್ಟಿಗೆಯಲ್ಲಿ ಅವನು ನನಗೆ ಬರೆದ ಕಾಗದವೊಂದಿದೆಯೆಂದು ತೋರುತ್ತೆ.

ನೋರಾ:—ನನಗೆ ಗೊತ್ತಿಲ್ಲ, ಇದ್ದರೂ ಇರಬಹುದು. ಆದರೆ ನೀನು ಯಾವ ಕಾಗದವನ್ನೂ ಓದಕೂಡದು. ಈ ಉತ್ಸವ ಮುಗಿ ಯುವವರೆಗೆ ನಮ್ಮಿಬ್ಬರ ಮಧ್ಯೆ ಅಪ್ರಿಯವಾದದ್ದೊಂದೂ ಬರ ಕೂಡದು.

ಡ್ಯಾಂಕ್:—(ಹೆಲ್ಮರನ ಕಿವಿಯಲ್ಲಿ ಏನೋ ಪಿಸುಗುಟ್ಟುವನು) ಅವಳ ಮಾತಿಗೆ ಏನೂ ಎದುರು ಹೇಳಬೇಡ.

ಹೆಲ್ಮರ್:—(ನೋರಾವನ್ನು ತಬ್ಬಿಕೊಂಡು) ಈ ಹೊತ್ತು, ಈ ಮಗು ಹೇಳಿದಹಾಗೆ ಕೇಳೋಣ. ನಾಳೆ ರಾತ್ರಿ ನರ್ತನವಾದ ನಂತರ—

ನೋರಾ:—ಆ ಮೇಲೆ ನೀನು ಏನು ಬೇಕಾದರೂ ಮಾಡಬಹುದು.
(ಸೇವಕಳು ಬಲಗಡೆ ಬಾಗಿಲಿನಿಂದ ಒಳಕ್ಕೆ ಬುರವಳು)

ಸೇವಕಳು:—ಊಟಕ್ಕೆ ಬಡಿಸಿ ಸಿದ್ಧವಾಗಿದೆಯಮ್ಮ.

ನೋರಾ:—ಹೆರ್ಲ ಊಟಕ್ಕೆ 'ಷಾಂಪೇ' ಸಿದ್ಧಪಡಿಸು.

ಸೇವಕಳು:—ಹಾಗೆಯೇ ಆಗಲಮ್ಮ—(ಹೋಗುವಳು)

ಹೆಲ್ಮರ್:—ಓಹೋ ಇದೇನಿದು? ಔತಣವೇನು?

ನೋರಾ:—ಷಾಂಪೇಣ್ ಸಹಿತವಾದ ಔತನ—ಬೆಳಗಿನ ಝಾವದ ತನಕ! (ಕೂಗಿಹೇಳುತ್ತಾ) ಕೆಲವು ಮಿಠಾಯಿ ಚೂರುಗಳು—ಇದೊಂದು ಬಾರಿ ಮಾತ್ರ—ತುಂಬಾ ಮಿಠಾಯಿ—ಹೆಲೇಣ್!

ಹೆಲ್ಮರ್:—ಇಲ್ಲಿ ಬಾ ಇಲ್ಲಿ. ಯಾಕೆ ಕಂಪಿಸುತ್ತಿದ್ದೀಯೆ? ಏನು ಅಂಜಿಕೆ? ಯಾಕೆ ಉನ್ಮತ್ತಳಂತೆ ಪ್ರವರ್ತಿಸುತ್ತಿದ್ದೀಯೆ? ನನ್ನ ಪುಟ್ಟ ಪಕ್ಷಿ ಎಂದಿನಂತೆ ಆಟವಾಡಿಕೊಂಡಿರಬೇಕು.

ನೋರಾ:—ಹಾಗೆಯೆ ಆಗಲಿ ಪ್ರಿಯ ತೊರ್ವಾಲ್ಡ್. ಇನ್ನು ನೀನೂ ಮತ್ತು ಡಾಕ್ಟರ್ ರ್‍ಯಾಂಕ್ ಒಳಗೆ ಹೋಗಿ. ಕ್ರಿಸ್ಟೀಣ್! ತಲೆ ಬಾಚಿ ಗಂಟುಹಾಕಿಕೊಳ್ಳಲು ನಿನ್ನ ಸಹಾಯ ಬೇಕು.

ರ್‍ಯಾಂಕ್:—(ಹೋಗುವಾಗ ಹೆಲ್ಮರನ ಕಿವಿಯಲ್ಲಿ ಪಿಸುಗುಟ್ಟುತ್ತಾ) ಪ್ರಮಾದ ವಿಷಯವೇನೂ ಇಲ್ಲತಾನೆ?—ಏನಾದರೂ ಬಯಕೆ ಗಿಯಕೆ ಸಂಕಟವಿರಬಹುದೆ?

ಹೆಲ್ಮರ್:—ಅಂಥಾದ್ದೇನೂ ಇಲ್ಲವಯ್ಯ; ನಾನು ಹೇಳುತ್ತಿರಲಿಲ್ಲವೆ? ಏನೋ ಹುಡುಗು ಬುದ್ಧಿ! ಪರೀಕ್ಷೆಗೆ ಮುಂಚೆ ಹುಡುಗರು ಅಂಜಿಕೊಂಡಿರುವಂತೆ! (ಬಲಗಡೆ ಚಿಕ್ಕಮನೆಯೊಳಗೆ ಹೋಗುವರು.)

ನೋರಾ:—ಏನಾಯಿತು?

ಲಿಂಡ್:—ಊರುಬಿಟ್ಟು ಹೊರಟುಹೋಗಿದ್ದ.

ನೋರಾ:—ನಿನ್ನ ಮುಖವನ್ನು ನೋಡಿದೊಡನೆಯೆ ಮನಸ್ಸಿಗೆ ಹೊಳೆಯಿತು.

ಲಿಂಡ್:—ನಾಳೆ ಸಾಯಿಂಕಾಲ ವಾಪಸ್ಸು ಬರುತ್ತಾನಂತೆ. ಅವನಿಗೆ ಒಂದು ಕಾಗದವನ್ನು ಬರೆದಿಟ್ಟು ಬಂದಿದೇನೆ.

ನೋರಾ:—ಎನೋ ಆ ವಿಷಯವನ್ನು ಅಲ್ಲೇ ಬಿಟ್ಟುಬಿಡಬಹುದಾಗಿತ್ತು. ಆಗಬೇಕಾದ್ದು ಯಾವುದನ್ನೂ ತಡೆಯಬೇಡ. ಮಹ

ತ್ಸಂಘಟನೆಗಳ ನಿರೀಕ್ಷಣೆ ಎಷ್ಟು ಪ್ರಶಸ್ತವಾದ ಅನುಭವ!

ಲಿಂಡ್:—ನೀನು ನಿರೀಕ್ಷಿಸುತ್ತಿರುವುದೇನು? ನಿನ್ನ ನಿರೀಕ್ಷಣೆ ಏನು? ನೀನು ಏನನ್ನು ಕಾದುಕೊಂಡಿದ್ದೀಯೆ?

ನೋರಾ:—ನಿನಗೆ ಅದು ಅರ್ಥವಾಗುವುದಿಲ್ಲ. ಅವರೆಲ್ಲರೂ ಊಟಕ್ಕೆ ಕಾದುಕೊಂಡಿದಾರೆ. ನೀನು ಒಳಗೆ ಹೋಗು; ಅರ್ಧಕ್ಷಣದಲ್ಲಿ ನಾನೂ ಬರುತ್ತೇನೆ. (ಮಿಸೆಸ್ ಲಿಂಡ್ ಊಟದ ಮನೆಗೆ ಹೋಗುವಳು. ಮನಸ್ಸಿಗೆ ಸಮಾಧಾನಪಡಿಸಿಕೊಳ್ಳುವಂತೆ ನೋರಾ ಸ್ವಲ್ಪಹೊತ್ತು ನಿಂತಿರುವಳು. ಗಡಿಯಾರವನ್ನು ನೋಡುವಳು.) ಐದುಘಂಟೆ, ಅರ್ಧರಾತ್ರಿಗೆ ಇನ್ನೂಏಳು ಘಂಟೆಗಳು ಉಳಿದಿರುವುದು. ಆ ಮೇಲೆ ಇಪ್ಪತ್ತುನಾಲ್ಕು ಘಂಟೆ. ನಾಳೆಯ ಅರ್ಧರಾತ್ರಿಗೆ ಅಷ್ಟು ಹೊತ್ತಿಗೆ ಟರ್ರಾಟೆಲ್ಲಾ ನರ್ತನಮುಗಿದಿರುತ್ತದೆ. ಇಪ್ಪತ್ತುನಾಲ್ಕು ಮತ್ತು ಏಳು—ಒಟ್ಟು ಮೂವತ್ತೊಂದು ಘಂಟೆಗಳು ಬದುಕಿರಬಹುದು!

ಹೆಲ್ಮರ್:—(ಎಡಗಡೆ ಬಾಗಿಲಿನಿಂದ) ನನ್ನ ಪುಟ್ಟ ಪಕ್ಷಿ ಎಲ್ಲಿದೆ?

ನೋರಾ:—(ಅಂಗಲಾಚಿಕೊಳ್ಳುವುದಕ್ಕೋಸ್ಕರ ಎರಡು ಕೈಗಳನ್ನೂ ಪಸರಿಸಿಕೊಂಡು ಹೆಲ್ಮರನ ಕಡೆ ಓಡುತ್ತಾ) ಇಗೋ ಇಲ್ಲಿದೆ!

(ಎರಡನೆಯ ಅಂಕವು ಮುಗಿದುದು)

# ಮೂರನೆಯ ಅಂಕ

[ದೃಶ್ಯ:—ಅದೇ ದೃಶ್ಯ. ಮೇಜನ್ನು ರಂಗಭೂಮಿಯ ಮಧ್ಯದಲ್ಲಿಟ್ಟಿದ್ದಾರೆ. ಅದರ ಸುತ್ತಲೂ ಕುರ್ಚಿಗಳಿವೆ. ಮೇಜಿನ ಮೇಲೆ ಒಂದು ದೀಪವು ಉರಿಯುತ್ತಿದೆ. ಹಜಾರದ ಬಾಗಿಲು ತೆರೆದಿದೆ. ಮನೆಯ ಮೇಲಿನ ಅಂತಸ್ಥಿನಿಂದನರ್ತನ ಸಂಬಂಧವಾದ ಗಾನವೊಂದು ಕೇಳಿಬರುತ್ತಲಿದೆ. ಒಂದು ಪುಸ್ತಕದ ಹಾಳೆಗಳನ್ನು ತಿರಿವಿ ಹಾಕುತ್ತಾ ಮೇಜಿನ ಮುಂದೆ ಒಂದು ಕುರ್ಚಿಯಮೇಲೆ, ಮಿಸೆಸ್ ಲಿಂಡ್ ಕುಳಿತಿದ್ದಾಳೆ. ಓದೋಣವೆಂದು ಪ್ರಯತ್ನಪಟ್ಟರೂ ಮನಸ್ಸೆಲ್ಲಾ ಬೇರೊಂದು ಕಡೆ ಇದೆ. ಕ್ಷಣಕ್ಷಣವೂ ಹೊರಬಾಗಿಲಿನಿಂದ ಏನಾದರೂ ಶಬ್ದ ಕೇಳಿಬರುವುದೆಂದು ಆಲಿಸಿ ಆ ಕಡೆಗೆ ನೋಡುತ್ತಾಳೆ.]

ಲಿಂಡ್:—(ಗಡಿಯಾರವನ್ನು ನೋಡುತ್ತ) ಇನ್ನೂ ಇಲ್ಲ-ಆದರೆ ಕಾಲ ಮುಗಿಯುತ್ತಾ ಬಂತು. ಅವನು ಬಾರದೆ ಇದ್ದರೆ—(ಪುನಃ ಆಲಿಸಿ ಕೇಳುವಳು) ಆಹಾ ಬಂದನು! (ಹಜಾರದೊಳಕ್ಕೆ ಹೋಗಿ ಹೊರಬಾಗಿಲನ್ನು ಜಾಗರೂಕತೆಯಿಂದ ಮೆಲ್ಲಗೆ ತೆಗೆಯುತ್ತಾಳೆ. ಮೆಟ್ಟಲುಗಳ ಮೇಲೆ ಕಾಲು ನಡಿಗೆ ಕೇಳಿಬರುವುದು. ಅವಳು ಪಿಸಮಾತನ್ನಾಡುವಳು.) ಬಾ. ಒಳಗೆ; ಯಾರೂ ಇಲ್ಲ.

ಕ್ರಾಗ್‌ಸ್ಟಾಡ್:—(ಬಾಗಿಲಿನಲ್ಲಿ) ನನ್ನ ಮನೆಯಲ್ಲಿ ನೀನು ಬರೆದಿಟ್ಟಿದ್ದ ಕಾಗದವನ್ನು ನೋಡಿದೆ. ಅದರ ಅರ್ಥವೇನು?

ಲಿಂಡ್:—ನಿನ್ನ ಸಂಗಡ ನಾನು ಅತ್ಯವಶ್ಯಕವಾಗಿ ಮಾತಾಡಬೇಕಾಗಿದೆ.

ಕ್ರಾಗ್‌ಸ್ಟಾಡ್:—ಹಾಗೆಯೆ? ಆ ಮಾತು ಇಲ್ಲೇ ಆಗಬೇಕಾದ್ದೂ ಅವಶ್ಯಕವೆ?

ಲಿಂಡ್:—ನಾನು ವಾಸವಾಗಿರುವ ಮನೆಯಲ್ಲಿ ಅದಕ್ಕನುಕೂಲವಿಲ್ಲ. ನನ್ನ ಚಿಕ್ಕಮನೆಗೆ ಒಳಬಾಗಿಲಿಲ್ಲ. ಒಳಗೆ ಬಾ. ಇಲ್ಲಿ ಯಾರೂ ಇಲ್ಲ ಸೇವಕಳು ಮಲಗಿಕೊಂಡಿದ್ದಾಳೆ. ಹೆಲ್ಮರ್

ದಂಪತಿಗಳು ಮೇಲಿನ ಮಹಡಿಯಲ್ಲಿ ಗಾನ ಮತ್ತು ನರ್ತನದಲ್ಲಿ ಉದ್ಯುಕ್ತರಾಗಿದ್ದಾರೆ.

ಕ್ರಾಗ್‌ಸ್ಟಾಡ್:—(ಚಿಕ್ಕಮನೆಯೊಳಗೆ ಬಂದು) ಹೆಲ್ಮರ್‌ದಂಪತಿಗಳು ನಿಜವಾಗಿಯೂ ನರ್ತನಕ್ಕೆ ಹೋಗಿದ್ದಾರೆಯೆ?

ಲಿಂಡ್:—ಹೌದು ಯಾತಕ್ಕೆ ಕೂಡದು?

ಕ್ರಾಗ್‌ಸ್ಟಾಡ್:—ಸರಿತಾನೆ! ಯಾತಕ್ಕೆ ಕೂಡದು?

ಲಿಂಡ್:—ನಿಲ್ಸ್; ನೋಡು. ನಮ್ಮ ಮಾತನ್ನು ಪ್ರಾರಂಭಿಸೋಣ.

ಕ್ರಾಗ್‌ಸ್ಟಾಡ್:—ನಾವಿಬ್ಬರೂ ಮಾತಾಡುವುದೇನಿದೆ?

ಲಿಂಡ್:—ನಾವಿಬ್ಬರೂ ಮಾತಾಡುವುದು ಬಹಳವಿದೆ.

ಕ್ರಾಗ್‌ಸ್ಟಾಡ್:—ನಾನು ಹಾಗೆ ಯೋಚಿಸಿರಲಿಲ್ಲ.

ಲಿಂಡ್:—ಇಲ್ಲ; ನನ್ನ ಸ್ವಭಾವವನ್ನು ನೀನು ಯಾವಾಗಲೂ ಸರಿಯಾಗಿ ಗ್ರಹಿಸಿಲ್ಲ.

ಕ್ರಾಗ್‌ಸ್ಟಾಡ್:—ಏನು ಗ್ರಹಿಸಬೇಕಾಗಿತ್ತು? ಪ್ರಪಂಚಕೆಲ್ಲಾ ತಿಳಿದ ವಿಷಯವೇ ಅಲ್ಲವೆ? ನಿಷ್ಕರುಣಿಯಾದ ಒಬ್ಬ ಹೆಂಗಸು ಬೇರೊಬ್ಬ ಐಶ್ವರ್ಯವಂತನು ಸಿಕ್ಕಿದೊಡನೆಯೇ ತನ್ನನ್ನು ಮೋಹಿಸಿದ್ದ ಮೊದಲ ಮನುಷ್ಯನನ್ನು ವಂಚಿಸುತ್ತಾಳೆಂದಲ್ಲವೆ?

ಲಿಂಡ್:—ನಾನು ಅಷ್ಟು ನಿಷ್ಕರುಣಿಯೆಂದು ನಂಬಿದ್ದೀಯಾ? ಅಷ್ಟು ಉದಾಸೀನ ಬುದ್ಧಿಯಿಂದ ಹಾಗೆ ಮಾಡಿದೆನೆಂದು ತಿಳಿದುಕೊಂಡಿದ್ದೀಯಾ?

ಕ್ರಾಗ್‌ಸ್ಟಾಡ್:—ನೀನು ಹಾಗೆ ಮಾಡಲಿಲ್ಲವೆ?

ಲಿಂಡ್:—ನೀನು ನಿಜವಾಗಿಯೂ ಹಾಗೆ ಭಾವಿಸಿದೆಯಾ?

ಕ್ರಾಗ್‌ಸ್ಟಾಡ್:—ನಿನ್ನ ಮಾತು ನಿಜವಾದರೆ ಆಗ ನನಗೆ ಕಾಗದವನ್ನು ಯಾಕೆ ಹಾಗೆ ಬರೆದೆ?

ಲಿಂಡ್:—ಆಗ್ಗೆ, ಬೇರೆ ಏನೂ ಮಾಡಲು ಅವಕಾಶವಿರಲಿಲ್ಲ. ನಿನ್ನನ್ನು ಬಿಟ್ಟು ಹೋಗಬೇಕಾಗಿ ಬಂತು. ನೀನು ನನ್ನ

ಮೇಲೆ ಇಟ್ಟಿದ್ದ ಪ್ರೀತಿಯನ್ನೆಲ್ಲಾ ನಿರ್ಮೂಲವಾಗಿ ಕೊನೆಗಾಣಿಸಬೇಕಾದ್ದು ನನ್ನ ಕರ್ತವ್ಯವಾಯಿತು.

ಕ್ರಾಗ್‌ಸ್ಟಾಡ್:—(ಕೈಹಿಸಿಕಿಕೊಳ್ಳುತ್ತಾ) ಹಾಗೋ ಅದು ? ಇಷ್ಟೆಲ್ಲಾ ದುಡ್ಡಿಗೋಸ್ಕರವೇ ಅಲ್ಲವೆ ?

ಲಿಂಡ್:—ಆಗ್ಗೆ ನನಗೆ ನಿರ್ಗತಿಕಳಾದ ತಾಯಿಯೊಬ್ಬಳು, ಚಿಕ್ಕ ತಮ್ಮಂದಿರು ಇಬ್ಬರು ಇದ್ದರು ಎನ್ನುವುದನ್ನು ನೀನು ಮರೆಯಬಾರದು. ನಿನಗೋಸ್ಕರ ಕಾಯಲು ಆಗುತ್ತಿರಲಿಲ್ಲ. ಮತ್ತು ಆಗ್ಗೆ ನಿನ್ನ ಪುರೋಭಿವೃದ್ಧಿ ಅಷ್ಟು ಉಜ್ವಲವಾಗಿ ಕಾಣುತ್ತಿರಲಿಲ್ಲ.

ಕ್ರಾಗ್‌ಸ್ಟಾಡ್:—ನೀನು ಹೇಳುವುದು ನಿಜವಿರಬಹುದು. ಆದಾಗ್ಯೂ ಮೊದಲು ನನ್ನನ್ನು ಮದುವೆಯಾಗುತ್ತೇನೆಂದು ಭಾಷೆ ಕೊಟ್ಟು ಅನಂತರ ನನ್ನನ್ನು ಬಿಟ್ಟು ಮತ್ತೊಬ್ಬನನ್ನು ಸೇರಲು ನಿನಗೆ ಅಧಿಕಾರವಿರಲಿಲ್ಲ.

ಲಿಂಡ್:—ಆದು ಹೇಗೆ ಹೇಳುವುದಕ್ಕಾದೀತು ? ಹಾಗೆ ಮಾಡುವುದಕ್ಕೆ ಅಧಿಕಾರವಿದೆಯೇ ಎಂದು ಅನೇಕಾವರ್ತಿ ನಾನು ಮನಸ್ಸಿನಲ್ಲೇ ತರ್ಕಮಾಡುತ್ತಿದ್ದೆ.

ಕ್ರಾಗ್‌ಸ್ಟಾಡ್:—(ಸ್ವಲ್ಪ ನಯವಾಗಿ) ನಿನ್ನನ್ನು ಕಳೆದುಕೊಂಡಾಗ ಭೂಮಿಯೇ ನನ್ನ ಕಾಲು ಕೆಳಗೆ ಬಾಯಿಬಿಟ್ಟು ನುಂಗಿದಂತೆ ಆಯಿತು. ನನ್ನನ್ನು ಈಗ ನೋಡು. ನನ್ನ ಜೀವಮಾನದ ಹಡಗು ಬಿರುಗಾಳಿಗೆ ಸಿಕ್ಕಿ ಚೂರುಚೂರಾಗಿ ನಾನು ಕೂಡ ಸಮುದ್ರದ ಮೇಲೆ ಒಂದು ಮರದತುಂಡನ್ನು ಆಶ್ರಯಿಸಿಕೊಂಡು ತೇಲುತ್ತಿರುವ ನಾವಿಕನಂತಿದ್ದೇನೆ.

ಲಿಂಡ್:—ಆದರೆ ಸಹಾಯವು ಸಮೀಪದಲ್ಲೇ ಇರಬಹುದು.

ಕ್ರಾಗ್‌ಸ್ಟಾಡ್:—ಸಹಾಯವು ಹತ್ತಿರದಲ್ಲೇ ಇತ್ತು. ಆದರೆ ನೀನು ಅಡಚಣೆಯಾಗಿ ಬಂದೆ.

ಲಿಂಡ್:—ಉದ್ದೇಶಪೂರ್ವಕವಾಗಿಯಲ್ಲ ನಿಲ್ಸ್! ಈದಿನ ಬೆಳಿಗ್ಗೆ ತಾನೆ ನಿನ್ನ ಸ್ಥಾನಕ್ಕೆ ಬ್ಯಾಂಕಿನಲ್ಲಿ ನಾನು ಬರುತ್ತೇನೆಂದು ತಿಳಿಯಿತು

ಕ್ರಾಗ್‌ಸ್ಟಾಡ್:—ನೀನು ಹಾಗೆ ಹೇಳಿದರೆ ನಿನ್ನ ಮಾತು ನಂಬುತ್ತೇನೆ. ಈಗ ನಿನಗೆ ಗೊತ್ತಾಗಿದೆಯಲ್ಲ-ಈಗಲಾದರೂ ನನಗೆ ಆಸ್ಥಾನವನ್ನು ಬಿಟ್ಟುಕೊಡುತ್ತೀಯಾ?

ಲಿಂಡ್:—ಇಲ್ಲ—ಯಾಕೆಂದರೆ ನಾನು ಆ ಸ್ಥಾನವನ್ನು ಬಿಟ್ಟದ್ದರಿಂದ ನಿನಗೇನೋ ಸ್ವಲ್ಪವೂ ಉಪಯೋಗವಾಗುವುದಿಲ್ಲ.

ಕ್ರಾಗ್‌ಸ್ಟಾಡ್:—ಓ-ಉಪಯೋಗ—ಉಪಯೋಗ—ನಾನಾಗಿದ್ದರೆ ಉಪಯೋಗವಿರಲಿ, ಇಲ್ಲದಿರಲಿ ಬಿಟ್ಟುಕೊಡುತ್ತಿದ್ದೆ.

ಲಿಂಡ್:—ನಾನು ದೂರಾಲೋಚನೆಯಿಂದ ಪ್ರವರ್ತಿಸುವುದನ್ನು ಕಲಿತುಕೊಂಡಿದ್ದೇನೆ. ಸಂಸಾರದ ಜವಾಬುದಾರಿ ಮತ್ತು ಕಷ್ಟತರವಾದ, ದುಃಖಕರವಾದ ಬಡತನ ಇವುಗಳು ಆ ಪಾಠವನ್ನು ನನಗೆ ಹೇಳಿಕೊಟ್ಟವೆ.

ಕ್ರಾಗ್‌ಸ್ಟಾಡ್:—ಈ ಜೀವಮಾನದಲ್ಲಿ ನಾನೂ ಒಂದು ಪಾಠವನ್ನು ಕಲಿತುಕೊಂಡಿದ್ದೇನೆ; ಚಮತ್ಕಾರದ ಮಾತುಗಳನ್ನು ನಂಬಕೂಡದೆಂದು.

ಲಿಂಡ್:—ಹಾಗಾದರೆ ಜೀವಮಾನವು ವಿವೇಕ ಯುಕ್ತವಾದ ಪಾಠವನ್ನು ಹೇಳಿಕೊಟ್ಟಿದೆ. ಆದಾಗ್ಗೂ ಮಾತಿನಲ್ಲಿ ಇಲ್ಲದಿದ್ದರೂ ಕಾರ್ಯದಲ್ಲಿ ನಂಬಿಕೆ ಇರಬೇಕಲ್ಲವೆ?

ಕ್ರಾಗ್‌ಸ್ಟಾಡ್:—ಆ ಮಾತಿನ ಅರ್ಥವೇನು?

ಲಿಂಡ್:—ಹಡಗು ಒಡೆದು ಚೂರು ಚೂರಾಗಿ ಹೋಗಿ ಒಂದು ಮರದ ತುಂಡನ್ನು ಆಶ್ರಯಿಸಿಕೊಂಡು ಸಮುದ್ರದ ಮೇಲೆ ತೇಲಾಡುತ್ತಿರುವ ನಾವಿಕನಹಾಗಿದ್ದೀಯೆಂದು ನೀನು ಹೇಳಿದೆ.

ಕ್ರಾಗ್‌ಸ್ಟಾಡ್:—ಹಾಗೆ ಹೇಳಲು ಅನೇಕ ಕಾರಣಗಳಿವೆ.

ಲಿಂಡ್:—ನಾನೂ ಕೂಡ ಅದೇ ರೀತಿಯಲ್ಲಿ ಜೀವನಸಮುದ್ರದ ಮೇಲೆ ಒಲಾಡುತ್ತಿದೇನೆ. ನಾನು ಸಾಕಬೇಕಾದವರು ಯಾರೂ ಇಲ್ಲ; ನಾನು ಯಾರಿಗೂ ದುಃಖಪಡಬೇಕಾಗಿಲ್ಲ.

ಕ್ರಾಗ್‌ಸ್ಟಾಡ್:—ಅದು ನೀನಾಗಿ ಕೋರಿದುದು. ನೀನು ಹಾಸಿದ ಹಾಸಿಗೆಯ ಮೇಲೆ ಮಲಗಬೇಕಲ್ಲವೆ? ನೀನು ಒಪ್ಪಿದ ಅವಸ್ಥೆ.

ಲಿಂಡ್:—ಬೇರೆ ಒಪ್ಪಿಗೆಗೆ ಅವಕಾಶವೇ ಇರಲಿಲ್ಲ—ಆವಾಗ!

ಕ್ರಾಗ್‌ಸ್ಟಾಡ್:—ಆಯಿತು—ಈವಾಗೇನು?

ಲಿಂಡ್:—ನಿಲ್ಸ್, ಹಡಗು ಕಳೆದುಕೊಂಡಿರುವ ಇಬ್ಬರು ಜೊತೆಗೂಡುವುದೆಂದರೆ ನಿನಗೆ ಹೇಗೆ ತೋರುತ್ತೆ.

ಕ್ರಾಗ್‌ಸ್ಟಾಡ್:—ಏನು ಹೇಳಿದೆ?

ಲಿಂಡ್:—ಬೇರೆ ಬೇರೆ ತೇಲಾಡುವುದರ ಬದಲು ಒಂದೇ ಮರದ ತುಂಡನ್ನು ಇಬ್ಬರೂ ಆಶ್ರಯಿಸಿಕೊಂಡಿದ್ದರೆ ಇಬ್ಬರಿಗೂ ಅನುಕೂಲವಲ್ಲವೆ?

ಕ್ರಾಗ್‌ಸ್ಟಾಡ್:—ಕ್ರಿಸ್ಟೀ!

ಲಿಂಡ್:—ನಾನು ಈ ಊರಿಗೆ ಯಾತಕ್ಕೆ ಬಂದೆ, ನಿನಗೆ ಗೊತ್ತೆ?

ಕ್ರಾಗ್‌ಸ್ಟಾಡ್:—ಒಂದು ಅರೆ ನಿಮಿಷವಾದರೂ ನನ್ನ ಯೋಚನೆ ನಿನಗಿತ್ತೆಂದು ನಂಬಲೆ?

ಲಿಂಡ್:—ಕೆಲಸವಿಲ್ಲದ ಬಾಳು ನನಗೆ ಸಹ್ಯವಾಗಲಿಲ್ಲ. ನನ್ನ ಜೀವಮಾನದಲ್ಲೆಲ್ಲಾ—ನನಗೆ ಜ್ಞಾಪಕ ಶಕ್ತಿ ಇರುವ ಕಾಲದಿಂದ—ನಾನು ಯಾವಾಗಲೂ ಕೆಲಸಮಾಡುತ್ತಲೇ ಇದೇನೆ. ಕೆಲಸವೇ ನನ್ನ ಸಂತೋಷ. ಈಗ ನಾನು ಒಬ್ಬಂಟಿಗಳಾಗಿಬಿಟ್ಟೆ—ನನ್ನ ಜೀವಮಾನವೆಲ್ಲಾ ಬರಿದಾಗಿದೆ. ನನ್ನನ್ನು ಎಲ್ಲರೂ ತೊರೆದು ಬಿಟ್ಟರೆಂದು ಕಾಣುತ್ತೆ. ನನ್ನೊಬ್ಬಳಿಗೋಸ್ಕರ ದುಡಿಯುವುದರಲ್ಲಿ ನನಗೇನೂ ಸುಖ

ವಿಲ್ಲ. ನಾನು ಯಾರಿಗೋಸ್ಕರ ದುಡಿಯಲಿ? ಯಾತಕ್ಕೋಸ್ಕರ ದುಡಿಯಲಿ? ನನಗೆ ಏನಾದರೂ ಅಥವಾ ಯಾರನ್ನಾದರೂ ಕೊಡು.

ಕ್ರಾಗ್‌ಸ್ಟಾಡ್:—ಆ ಮಾತನ್ನು ನಂಬಲಾರೆ. ನಿನ್ನನ್ನು ಕಾಣಿಕೆಯಾಗಿ ಒಪ್ಪಿಸಿಕೊಳ್ಳುವುದು ಹೆಂಗಸಿನ ವಿಪರೀತಕ್ಕೆ ಹೋದ ಉದಾರ ಬುದ್ಧಿಯೇ ವಿನಹಾ ಮತ್ತೇನೂ ಇಲ್ಲ.

ಲಿಂಡ್:—ಅಂಥಾ ವಿಶೇಷವನ್ನು ನನ್ನಲ್ಲಿ ಯಾವಾಗಲಾದರೂ ನೀನು ನೋಡಿದ್ದೀಯಾ?

ಕ್ರಾಗ್‌ಸ್ಟಾಡ್:—ನೀನು ಹೇಳಿದಂತೆ ನಿಜವಾಗಿಯೂ ಮಾಡಬಲ್ಲೆಯಾ? ಹೇಳು ಮತ್ತೆ. ನನ್ನ ಪೂರ್ವ ವೃತ್ತಾಂತವೆಲ್ಲ ನಿನಗೆ ತಿಳಿದಿದೆಯೆ?

ಲಿಂಡ್:—ತಿಳಿದಿದೆ.

ಕ್ರಾಗ್‌ಸ್ಟಾಡ್:—ನನ್ನನ್ನು ಇಲ್ಲಿ ಹೇಗೆ ಗಣಿಸುತ್ತಾರೆಂದು ನಿನಗೆ ಗೊತ್ತೆ?

ಲಿಂಡ್:—ನಾವಿಬ್ಬರೂ ಜೊತೆ ಸೇರಿದ್ದ ಪಕ್ಷದಲ್ಲಿ ನೀನು ಬೇರೆ ಮನುಷ್ಯನಾಗಿರುತ್ತಿದ್ದೆಯೆಂದು ನಿನ್ನ ಮಾತಿನಲ್ಲಿ ಧ್ವನಿ ಬಂತು; ಅಲ್ಲವೆ?

ಕ್ರಾಗ್‌ಸ್ಟಾಡ್:—ಅದೇ ನನ್ನ ಅರ್ಥ.

ಲಿಂಡ್:—ಈಗ ಕಾಲ ಮಿಂಚಿಹೋಯಿತೇನು?

ಕ್ರಾಗ್‌ಸ್ಟಾಡ್:—ಕ್ರಿಸ್ಟೀ, ಈ ಮಾತನ್ನು ಮನಃಪೂರ್ವಕವಾಗಿ ಆಡುತ್ತಿದ್ದೀಯಾ? ಹೌದು, ನಿನ್ನ ಮುಖವನ್ನು ನೋಡಿದರೆ ನಿಜವೆಂದು ಕಾಣುತ್ತೆ. ಹಾಗಾದರೆ ನಿನಗೆ ಧೈರ್ಯವಿದೆಯೆ—?

ಲಿಂಡ್:—ನಾನು ಯಾರಿಗಾದರೂ ತಾಯಿಯಾಗಿರಬೇಕೆಂದು ಆಸೆ- ನಿನ್ನ ಮಕ್ಕಳಿಗೆ ತಾಯಿ ಇಲ್ಲ. ನಾವಿಬ್ಬರೂ ಒಬ್ಬರಿಗೊಬ್ಬರು ಬೇಕು. ನಿಲ್ಸ್, ನಿನ್ನ ಸೌಜನ್ಯದಲ್ಲಿ ನನಗೇನೋ ನಿಜ

ವಾದ ನಂಬಿಕೆಯಿದೆ. ನಿನ್ನ ಜೊತೆಯಲ್ಲಿ ನಾನು ಮೂರು ಲೋಕವನ್ನೂ ಜಯಿಸಬಲ್ಲೆ.

ಕ್ರಾಗ್‌ಸ್ಟಾಡ್:—(ಅವಳ ಕೈಯನ್ನು ಬಿಗಿಯಾಗಿ ಹಿಡಿದುಕೊಂಡು) ಕ್ರಿಸ್ಟೀ, ಧನ್ಯನಾದೆ ನಾನು ಧನ್ಯನಾದೆ, ಇನ್ನುಮೇಲೆ ಜನರ ಗಣನೆಯಲ್ಲಿ ನಾನೊಬ್ಬ ಮನುಷ್ಯನಾಗುತ್ತೇನೆ. ಆದರೆ ಮರೆತಿದ್ದೆ—

ಲಿಂಡ್:—(ಕೇಳುತ್ತಾ) ಹುಷ್! ಟರ್ರಾಟೆಲ್ಲಾ! ನೀನು ಹೊರಡು ಹೊರಡು.

ಕ್ರಾಗ್‌ಸ್ಟಾಡ್:—ಯಾಕೆ? ಅದೇನದು?

ಲಿಂಡ್:—ನಿನಗೆ ಕೇಳುತ್ತದೆಯೆ ಮಹಡಿಯಮೇಲೆ? ಆ ಹಾಡು ಮುಗಿದಮೇಲೆ ಅವರೆಲ್ಲರೂ ಹಿಂತಿರುಗಿ ಬರುತ್ತಾರೆ.

ಕ್ರಾಗ್‌ಸ್ಟಾಡ್:—ಹೌದು ಹೌದು—ನಾನು ಹೊರಡುತ್ತೇನೆ. ಆದರೆ ಉಪಯೋಗವೇನು? ನಾನು ಹೆಲ್ಮರ್‌ದಂಪತಿಗಳ ವಿಷಯವಾಗಿ ನಡೆಸಿರುವ ಕಾರ್ಯಗಳು ನಿನಗೆ ತಿಳಿಯದು.

ಲಿಂಡ್:—ಅವುಗಳೆಲ್ಲಾ ನನಗೆ ಚೆನ್ನಾಗಿ ಗೊತ್ತು.

ಕ್ರಾಗ್‌ಸ್ಟಾಡ್:—ತಿಳಿದೂ ಕೂಡ ನೀನು ಧೈರ್ಯವನ್ನು ತಾಳಿ—

ಲಿಂಡ್:—ನಿನ್ನಂತಹ ಮನುಷ್ಯನು ನಿರಾಶನಾದರೆ ಏನೇನು ಮಾಡಬಲ್ಲನೋ ಅದನ್ನು ನಾನು ತಿಳಿಯಲಿಲ್ಲ.

ಕ್ರಾಗ್‌ಸ್ಟಾಡ್:—ನಾನು ಮಾಡಿದ್ದನ್ನು ಹಿಂತಿರುಗಿಸಬಲ್ಲೆನಾದರೆ!

ಲಿಂಡ್:—ನೀನು ಮಾಡಲಾರೆ. ನಿನ್ನ ಕಾಗದವು ಟಪಾಲು ಪೆಟ್ಟಿಗೆಯಲ್ಲಿದೆ.

ಕ್ರಾಗ್‌ಸ್ಟಾಡ್:—ಖಂಡಿತವಾಗಿ?

ಲಿಂಡ್:—ಖಂಡಿತವಾಗಿ, ಆದರೆ—

ಕ್ರಾಗ್‌ಸ್ಟಾಡ್:—(ಅವಳನ್ನು ಪರೀಕ್ಷೆಮಾಡುವಂತೆ ನೋಡುತ್ತಾ) ಇದಕ್ಕೆಲ್ಲಾ ಆದೆಯೋ ನಿನ್ನ ಅರ್ಥ? ಯಾವ ಬೆಲೆಯನ್ನಾ

ದರೂ ತೆತ್ತು ನಿನ್ನ ಸ್ನೇಹಿತಳನ್ನು ರಕ್ಷಿಸಬೇಕೆಂದು! ನಿರ್ವಂಚನೆಯಾಗಿ ಹೇಳು. ಹಾಗೇನು ಅದು?

ಲಿಂಡ್:—ನಿಲ್ಸ್, ಮತ್ತೊಬ್ಬರಿಗೋಸ್ಕರ ಒಂದು ಸಾರಿ ತನ್ನನ್ನು ಮಾರಿಕೊಂಡ ಹೆಂಗಸು ಪುನಃ ಹಾಗೆ ಮಾಡಲಾರಳು.

ಕ್ರಾಗ್‌ಸ್ಟಾಡ್:—ಆ ಕಾಗದವನ್ನು ವಾಪಸ್ಸು ಕೇಳುತ್ತೇನೆ.

ಲಿಂಡ್:—ಬೇಡ-ಬೇಡ—

ಕ್ರಾಗ್‌ಸ್ಟಾಡ್:—ಕೇಳಿಯೇ ಕೇಳುತ್ತೇನೆ, ಹೆಲ್ಮರ್ ಬರುವತನಕ ಇಲ್ಲಿಯೇ ಕಾದಿರುತ್ತೇನೆ. ನನ್ನ ಕಾಗದವನ್ನು ವಾಪಸ್ಸು ಕೊಡಬೇಕೆಂದು ಕೇಳುತ್ತೇನೆ.—ಕಾಗದದಲ್ಲಿರುವ ವಿಷಯ ನನ್ನ ಬರತರ್ಫಿನ ಸಂಬಂಧವಾದದ್ದು ಎಂದು ಹೇಳುವೆನು–ಅದನ್ನು ಅವನು ಓದತಕ್ಕ ಆವಶ್ಯಕವಿಲ್ಲವೆಂದು—

ಲಿಂಡ್:—ಬೇಡ ನಿಲ್ಸ್, ನೀನು ಕಾಗದವನ್ನು ಹಿಂತೆಗೆದುಕೊಳ್ಳ ಬೇಡ.

ಕ್ರಾಗ್‌ಸ್ಟಾಡ್:—ಹಾಗಾದರೆ ಹೇಳು. ಆ ಕಾಗದದ ವಿಷಯವಾಗಿ ಮಾತನಾಡುವುದಕ್ಕಲ್ಲವೆ ನೀನು ನನ್ನನ್ನು ಇಲ್ಲಿಗೆ ಬರಹೇಳಿ ಕಾಗದವನ್ನು ಬರೆದಿದ್ದು?

ಲಿಂಡ್:—ಗಾಬರಿಯ ಹೊಸದರಲ್ಲೇನೋ ನಾನು ಹಾಗೆಯೋಚನೆ ಮಾಡಿದ್ದು ನಿಜ. ಆದರೆ ಆಗಿನಿಂದೀಚೆಗೆ ಇಪ್ಪತ್ತುನಾಲ್ಕು ಘಂಟೆಗಳ ಕಾಲ ಕಳೆದುಹೋಯಿತು. ಆ ಕಾಲದಲ್ಲಿ ಈ ಮನೆಯಲ್ಲಿ ನಾನು ಕಣ್ಣಾರ ನೋಡಿದರೂ ನಂಬಲಾಗದಂಥ ವಿಷಯಗಳು ನಡೆದುಹೋಗಿವೆ. ಹೆಲ್ಮರಿಗೆ ಪ್ರತಿಯೊಂದೂ ತಿಳಿದುಬಿಡಬೇಕು. ಈ ಸುಖಹಾನಿಯಾದ ಗುಟ್ಟು ರಟ್ಟಾಗಬೇಕು. ಈ ಮುಚ್ಚುಮರೆ, ಸುಳ್ಳು, ತಟವಟ ಇವುಗಳೆಲ್ಲಾ ಮಾಯವಾಗುವ ತನಕ, ಅವರು ಒಬ್ಬರನ್ನೊಬ್ಬರು ಸಂಪೂರ್ಣವಾಗಿ ಅರಿತುಕೊಂಡು ಅವರ ಪ್ರೇಮ ಭದ್ರವಾಗಲಾರದು.

ಕ್ರಾಗ್‌ಸ್ಟಾಡ್:—ಹಾಗೆಯೇ ಆಗಲಿ, ನೀನು ಜವಾಬ್ದಾರಿಯನ್ನು

ವಹಿಸಿದರೆ—ಆದರೆ ನಾನು ಮತ್ತೊಂದು ಕಾರ್ಯವನ್ನು ಮಾಡಬಹುದು ಮತ್ತು ಅದನ್ನು ಕೂಡಲೆ ಮಾಡುತ್ತೇನೆ.

ಲಿಂಡ್:—(ಕೇಳುತ್ತಾ) ಇನ್ನು ನೀನು ಜಾಗ್ರತೆಮಾಡಿ ಹೋಗಬೇಕು. ನರ್ತನವು ಮುಗಿಯಿತು. ನಾವಿಬ್ಬರೂ ಜೊತೆಯಲ್ಲಿ ಇನ್ನೊಂದು ಕ್ಷಣವಿರುವುದೂ ಕ್ಷೇಮಕರವಲ್ಲ.

ಕ್ರಾಗ್‌ಸ್ಟಾಡ್:—ನಾನು ಕೆಳಗೆ ನಿನಗೋಸ್ಕರ ಕಾದುಕೊಂಡಿರುತ್ತೇನೆ.

ಲಿಂಡ್:—ಹಾಗೆ ಮಾಡು. ನನ್ನ ಮನೆಯತನಕ ಜೊತೆಯಲ್ಲಿ ಬರಬೇಕು.

ಲಿಂಡ್:—(ಚಿಕ್ಕಮನೆಯ ಸಾಮಾನುಗಳನ್ನು ಸ್ವಸ್ಥಾನದಲ್ಲಿಟ್ಟು ಸರಿಪಡಿಸುತ್ತಾ—ತನ್ನ ಮೇಲಂಗಿಯನ್ನೂ ಟೋಪಿಯನ್ನೂ ಕೈಗೆ ಸಿಕ್ಕುವ ಹಾಗೆ ಇಟ್ಟು)—ಎಷ್ಟು ವ್ಯತ್ಯಾಸ! ಎಷ್ಟು ವ್ಯತ್ಯಾಸ! ನನ್ನ ಜೀವನವನ್ನು ಮತ್ತು ಕೆಲಸವನ್ನು ವಿನಿಯೋಗಿಸುವುದಕ್ಕೆ ಒಬ್ಬಾತ, ಸುಖದಿಂದ ಬೆಳಗುವುದಕ್ಕೆ ಒಂದು ಮನೆ......ನನ್ನ ಜೀವನವೆಲ್ಲಾ ಇದಕ್ಕೇ ಧಾರೆಯೆರೆಯುವೆನು.—ಜಾಗ್ರತೆಯಾಗಿ ಇವರು ಮನೆಗೆ ಬಂದರೆ ಸಾಕು—(ಕಿವಿಗೊಟ್ಟು ಕೇಳುವಳು) ಅಗೋ ಬರುತ್ತಿರುವರು. ನನ್ನ ಬಟ್ಟೆಗಳನ್ನು ಹಾಕಿಕೊಳ್ಳಬೇಕು. (ತನ್ನ ಮೇಲಂಗಿಯನ್ನೂ ಮತ್ತು ಟೋಪಿಯನ್ನೂ ತೆಗೆದುಕೊಳ್ಳುವಳು. ಹೊರಗಿನಿಂದ ಹೆಲ್ಮರ್ ಮತ್ತು ನೋರಾವಿನ ಮಾತುಗಳು ಕೇಳಿಬರುವುವು ; ಬೀಗದಕ್ಕೆ ಶಬ್ದವಾಗುವುದು ; ಹೆಲ್ಮರ್ ನೋರಾವನ್ನು ಬಲವಂತದಿಂದ ನೂಕಿಕೊಂಡು ಒಳಗೆ ಕರೆದುಕೊಂಡು ಬರುವನು; ನೋರಾ ಇಟಲಿ ದೇಶದ ಉಡುಪನ್ನು ಧರಿಸಿ ನೈಸುತ್ತಾ ಒಂದು ಕರಿಶಾಲನ್ನು ಸುತ್ತಿಕೊಂಡಿದ್ದಾಳೆ; ಹೆಲ್ಮರನು ಸಂಧ್ಯಾಕಾಲದ ಉಡುಪನ್ನು ಧರಿಸಿದ್ದಾನೆ ; ಅದರಮೇಲೆ ಅರ್ಧ ತೆರೆದಿರುವ ಕರಿ ಮುಸಕೊಂದು ಕೂಡ ಇದೆ.)

ನೋರಾ:—(ಒಳಗೆ ಬರಲು ಹಿಂತೆಗೆಯುತ್ತಾ ಬಾಗಿಲಲ್ಲೇ ನಿಂತು ಅವನೊಡನೆ ಒದ್ದಾಡುತ್ತಾ) ಬೇಡ-ಬೇಡ-ಬೇಡ-ಒಳಕ್ಕೆ ಎಳೆದು

ಕೊಂಡು ಹೋಗಬೇಡ. ನಾನು ಮಹಡಿಯಮೇಲೆ ಹೋಗುತ್ತೇನೆ, ಇಷ್ಟು ಹೊತ್ತಿಗೆಮುಂಚೆ ಎಲ್ಲವನ್ನೂ ಬಿಟ್ಟುಬರಲು ನನಗೆ ಇಚ್ಛೆಯಿಲ್ಲ.

ಹೆಲ್ಮರ್:—ಆದರೆ ಪ್ರಿಯತಮೆ ನೋರಾ—

ನೋರಾ:—ಪ್ರಿಯ ತೊರ್ವಾಲ್ಡ್ ಪ್ರಿಯನೆ: ದಯವಿಟ್ಟು ದಯವಿಟ್ಟು —ಇನ್ನು ಒಂದು ಘಂಟೆ ಮಾತ್ರ.

ಹೆಲ್ಮರ್:—ಇನ್ನು ಒಂದು ನಿಮಿಷವೂ ಇಲ್ಲ, ಇನಿಯಳೆ. ಅದು ನಾವು ಮಾಡಿಕೊಂಡಿದ್ದ ಒಡಂಬಡಿಕೆ. ಚಿಕ್ಕಮನೆಯೊಳಕ್ಕೆ ಬಾ ; ಅಲ್ಲೇ ನಿಂತುಕೊಂಡಿದ್ದರೆ ಛಳಿಯಿಂದ ಶೀತವಾದೀತು. (ಅವಳು ತಡೆಯುತ್ತಿದ್ದರೂ ಮೆಲ್ಲನೆ ಒಳಕ್ಕೆ ನೂಕಿ ತರುವನು.)

ಲಿಂಡ್:—ಗುಡ್ ಈವಿನಿಂಗ್.

ನೋರಾ:—ಕ್ರಿಸ್ಟೀ !

ಹೆಲ್ಮರ್:—ಇದೇನಿದು ನೀನು ಇಲ್ಲಿ, !ಮಿಸೆಸ್ ಲಿಂಡ್ ಇಷ್ಟು ಹೊತ್ತಾದಮೇಲೆ !

ಲಿಂಡ್:—ಹೌದು ! ಕ್ಷಮಿಸಬೇಕು. ನೋರಾವನ್ನು ಅವಳ ಉಡುಪಿನಲ್ಲಿ ನೋಡಬೇಕೆಂದು ಆಸೆ ಇತ್ತು.

ನೋರಾ:—ನನಗೋಸ್ಕರ ಕಾದುಕೊಂಡು ಕೂತಿದ್ದೀಯಾ ?

ಲಿಂಡ್:—ಹೌದು, ನಾನು ಬರುವುದು ಸ್ವಲ್ಪ ಹೊತ್ತಾಯಿತು. ಅಷ್ಟು ಹೊತ್ತಿಗೆ ನೀನು ಮಹಡಿಯಮೇಲೆ ಹೋಗಿಬಿಟ್ಟಿದ್ದೆ. ನಿನ್ನನ್ನು ನೋಡದೆ ಹೊರಟುಹೋಗಲು ಮನಸ್ಸು ಒಪ್ಪಲಿಲ್ಲ.

ಹೆಲ್ಮರ್:—(ನೋರಾವಿನ ಶಾಲನ್ನು ತೆಗೆದು) ಸರಿ- ಅಗತ್ಯವಾಗಿ ನೋಡು ಚೆನ್ನಾಗಿ ನೋಡವಳನ್ನು. ಅವಳು ನೋಡಲರ್ಹವಾದ ಒಳ್ಳೆ ಸುಂದರಿಯೆ. ಅವಳು ಬಲು ಸೊಗಸಾಗಿಲ್ಲವೆ ಮಿಸೆಸ್ ಲಿಂಡ್ ?

ಲಿಂಡ್:—ಅಲ್ಲವೆ ! ಸೊಗಸಾಗಿದ್ದಾಳೆ.

ಹೆಲ್ಮರ್:—ನೋಡುವುದಕ್ಕೆ ಅತ್ಯಂತ ಚಲುವಾಗಿ ಕಾಣುವುದಿ

ಲ್ಲವೆ ಅವಳು ? ನರ್ತನ ಸಮಯದಲ್ಲಿ ಎಲ್ಲರೂ ಹಾಗೆಯೇ ಹೇಳಿದರು. ಆದರೆ ಈ ನನ್ನ ಪುಟ್ಟ ಪ್ರಾಣಪದಕವು ಸ್ವಲ್ಪ ಮೊಂಡಾಟಗಿತ್ತಿ. ಅವಳನ್ನೇನು ಮಾಡೋಣ? ನಾನು ಹೇಳಿದರೆ ನೀನು ನಂಬುವುದಿಲ್ಲ—ಅವಳನ್ನು ಬಲವಂತ ಮಾಡಿ ಎಳದುಕೊಂಡು ಬರಬೇಕಾಯಿತು.

ನೋರಾ:—ತೊರ್ವಾಲ್ಡ್ ನಾನು ಅಲ್ಲಿ ಇನ್ನು ಸ್ವಲ್ಪಹೊತ್ತಿರಲು—ಅರ್ಧ ಘಂಟೆಯಾದರೂ—ನೀನು ಒಪ್ಪದೆ ಇದ್ದುದಕ್ಕಾಗಿ ಮುಂದೆ ವ್ಯಥೆಪಡುವೆ.

ಹೆಲ್ಮರ್:—ಕೇಳು ಅವಳ ಮಾತುಗಳನ್ನು ಕೇಳು. ಅವಳು ಟರಾಟೆಲ್ಲಾ ನರ್ತನವನ್ನು ಪೂರೈಸಿದ್ದಳು. ಅದು ಅವಳ ಯೋಗ್ಯತೆಯನ್ನನುಸರಿಸಿ ಎಲ್ಲರ ಮೆಚ್ಚುಗೆಯನ್ನೂ ಪಡೆಯಿತು. ನನ್ನ ಅಭಿಪ್ರಾಯದಲ್ಲಿ ಮಾತ್ರ ಆ ನರ್ತನವು ನಾಟ್ಯಕಲೆಯ ಮರ್ಯಾದೆಯನ್ನು ಮೀರಿ ಅತಿಯಾಗಿ ಸ್ವಾಭಾವಿಕ ಅನುಕರಣವನ್ನು ತೋರಿಸುತ್ತಿತ್ತು. ಅದು ಹೋಗಲಿ! ಮುಖ್ಯವಾಗಿ ಅವಳ ಮನೋರಥವು ಸಿದ್ಧಿಸಿತು—ಎಲ್ಲರ ಮನಸ್ಸನ್ನೂ ಜಯಿಸಿಬಿಟ್ಟಳು. ಇದಾದಮೇಲೆ ಅಲ್ಲೇ ಇದ್ದುಕೊಂಡು ಹುಟ್ಟಿಸಿದ ಕಲಾಸ್ಫೂರ್ತಿ ಬಣ್ಣವಿಳಿಯುವಂತೆ ಮಾಡುವುದು ನ್ಯಾಯವೆ? ಎಂದಿಗೂ ಇಲ್ಲ. ನನ್ನ ಕಾಪ್ರಿನಗರದ ರಮಣಿಯನ್ನು—ಕಾಪ್ರಿನಗರದ ಚೆಲುವೆಯಾದ ಚಂಚಲೆ ಎಂದು ಹೇಳಲೆ?—ಕೈಯಲ್ಲಿ ಎತ್ತಿಕೊಂಡು ಸಭಿಕರ ಸುತ್ತಲೂ ಮರ್ಯಾದೆಗೋಸ್ಕರ ಕಾಣಿಸಿಕೊಂಡು ಬಂದುಬಿಟ್ಟೆ, ಕಥೆಗಳಲ್ಲಿ ಹೇಳುವಂತೆ, ದಿವ್ಯರೂಪು—ಅಧಿಕ ಲಾವಣ್ಯ ಜ್ಯೋತಿ—ಮಂಗಮಾಯವಾಯಿತು. ಇಂಥಾ ಸಂದರ್ಭಗಳಲ್ಲಿ ದೃಶ್ಯದ ಅಂತ್ಯದಲ್ಲಿ ನಿಷ್ಕ್ರಾಂತವೂ ಉತ್ಕರ್ಷವುಳ್ಳದ್ದಾಗಿ ಪರಿಣಮಿಸಬೇಕು. ಇದು ಮಾತ್ರ ನೋರಾವಿಗೆ ತಿಳುವಳಿಕೆಯಾಗಿಲ್ಲ. ಊ್ಹ—ಎಷ್ಟು ಸೆಖೆ ಈ ಚಿಕ್ಕಮನೆಯಲ್ಲಿ! (ಮುಸಕನ್ನು ಕುರ್ಚಿಯ ಮೇಲೆಸೆದು ತನ್ನ ಚಿಕ್ಕಮನೆಯ ಬಾಗಿಲನ್ನು ತೆರೆದು) ಇಲ್ಲೆಲ್ಲಾ

ಕೆತ್ತಲಿ—ಸರಿಸರಿ. ಸ್ವಲ್ಪ ಕ್ಷಮಿಸು. (ಒಳಗೆ ಹೋಗಿ ಮೇಣದ ಬತ್ತಿಗಳನ್ನು ಹಚ್ಚುವನು)

ನೋರಾ:—(ಜಾಗ್ರತೆಯಾಗಿ ಪಿಸುಮಾತಿನಲ್ಲಿ) ಏನಾಯಿತು ?

ಲಿಂಡ್:—(ಸಣ್ಣ ದನಿಯಿಂದ) ಅವನನ್ನು ಕಂಡು ಮಾತಾಡಿದೆ.

ನೋರಾ:—ಸರಿ—ಆಮೇಲೆ—

ಲಿಂಡ್:—ನೋರಾ ಎಲ್ಲವನ್ನೂ ನಿನ್ನ ಗಂಡನಿಗೆ ನೀನು ಹೇಳಿಬಿಡಬೇಕು.

ನೋರಾ:—(ಸಪ್ಪೆ ದನಿಯಿಂದ) ಗೊತ್ತಿತ್ತು ನನಗೆ ಅದು.

ಲಿಂಡ್:—ಕ್ರಾಗ್‌ಸ್ಟಾಡನಿಗೆ ನೀನು ಅಂಜಬೇಕಾದ ಅವಶ್ಯಕವಿಲ್ಲ ; ಆದರೂ ಕೂಡ ನಿನ್ನ ಗಂಡನಿಗೆ ಎಲ್ಲವನ್ನೂ ಹೇಳಬೇಕು.

ನೋರಾ:—ನಾನು ಹೇಳುವುದಿಲ್ಲ.

ಲಿಂಡ್:—ಹಾಗಾದರೆ ಆ ಕಾಗದ ಹೇಳುತ್ತದೆ.

ನೋರಾ:—ಸರಿ ಕ್ರಿಸ್ಟೀನ್, ನಿನಗೆ ಧನ್ಯಳಾಗಿದ್ದೇನೆ. ಈಗ ಮುಂದಿನ ಕಾರ್ಯವು ನಿಶ್ಚಿತವಾಯಿತು. ಹುಷ್—

ಹೆಲ್ಮರ್:—(ಒಳಗೆ ಬಂದು) ಮಿಸೆಸ್ ಲಿಂಡ್ ಅವಳನ್ನು ನೋಡಿ ಮೆಚ್ಚಿ ಆಯಿತೆ ?

ಲಿಂಡ್:—ಆಯಿತು—ನಾನು ಇನ್ನು ಹೊರಡಬೇಕು.

ಹೆಲ್ಮರ್:—ಏನು ಅವಸರ ? ಈ ಹೆಣಿಗೆ ಕೆಲಸ ನಿನ್ನದೆ ?

ಲಿಂಡ್:—(ಕೈಲಿ ತೆಗೆದುಕೊಂಡು) ಹೌದು, ಮರೆತುಬಿಟ್ಟಿದ್ದೆ.

ಹೆಲ್ಮರ್:—ಹಾಗಾದರೆ ಹೆಣಿಗೆ ಕೆಲಸ ನಿನಗೆ ಬರುತ್ತೆ ?

ಲಿಂಡ್:—ಆಹಾ ಬರುತ್ತೆ.

ಹೆಲ್ಮರ್:—ಕಲಾಪತ್ತು ಹೂ ಕೆಲಸವನ್ನು ಕಲಿತುಕೊಳ್ಳಬೇಕು ನೀನು !

ಲಿಂಡ್:—ಹಾಗೆಯೆ ? ಯಾತಕ್ಕೆ ?

ಹೆಲ್ಮರ್:—ಹೌದು—ಅದು ನಿನಗೆ ಅನುರೂಪವಾದದ್ದು. ನಿನಗೆ ತೋರಿಸಿಕೊಡುತ್ತೇನೆ ನೋಡು. ಎಡಗೈಯಲ್ಲಿ ಬಟ್ಟೆಯನ್ನು ಹೀಗೆ ಹಿಡಿದುಕೊಂಡು ಬಲಗೈಯಲ್ಲಿ ಸೂಜಿಯನ್ನು ಹಿಡಿದು-ಪಕ್ಷಿ ಹಾರುವಹಾಗೆ ಸುಲಭವಾಗಿ ಚೆಲುವಾಗಿ ಕೈಯನ್ನು ಬೀಸಿದರೆ ಎಷ್ಟು ರಮಣೀಯವಾಗಿರುವುದು! (ಇದನ್ನು ಅಭಿನಯಿಸಿ ತೋರಿಸುವನು)

ಲಿಂಡ್:—ಹೌದು—ಇರಬಹುದು—

ಹೆಲ್ಮರ್:—ಹೆಣಿಗೆಯ ಕೆಲಸವೆಂದರೆ—ನೋಡುವವರಿಗೆ ಅದರಲ್ಲೇನೂ ಅಷ್ಟು ಅಂದಚಂದಗಳು ಕಾಣುವುದಿಲ್ಲ—ನೋಡು ಇಲ್ಲಿ. ತೋಳುಗಳೆರಡನ್ನೂ ಒಟ್ಟು ಕೂಡಿಸಿಕೊಂಡು ಸೂಜಿಮನೆಗಳೆರಡು ಮೇಲಕ್ಕೆ ಕೆಳಕ್ಕೆ ಕುಣಿಯುತ್ತಾ—ಚೈನಾ ದೇಶದ ಕುಳ್ಳುಜನರಂತೆ ಕಾಣುತ್ತೆ. (ಅಭಿನಯಿಸಿ ತೋರಿಸುವನು)—ಭಲೆ ಸೊಗಸಾದ ಷಾಂಪೇನ್ ಅವರು ನಮಗೆ ಕೊಟ್ಟದ್ದು.

ಲಿಂಡ್:—ನಾನು ಹೋಗಿ ಬರುತ್ತೇನೆ ನೋರಾ—ಇನ್ನುಮೇಲಾದರೂ ಹಟಮಾರಿಯಾಗಿರಬೇಡ.

ಹೆಲ್ಮರ್:—ನಿನ್ನ ಮಾತು ಸರಿ ಮಿಸೆಸ್ ಲಿಂಡ್!

ಲಿಂಡ್:—ಹೋಗಿಬರುತ್ತೇನೆ ಹೆಲ್ಮರ್.

ಹೆಲ್ಮರ್:—(ಬಾಗಿಲ ತನಕ ಅವಳ ಜೊತೆಯಲ್ಲಿ ಹೋಗಿ) ಒಳ್ಳೇದು, ಹೋಗಿ ಬಾ. ಗುಡ್ ನೈಟ್. ಮನೆಗೆ ತಾನೆ ಹೋಗುತ್ತೀ? ನಾನು ಸ್ವಲ್ಪ ದೂರ ಜೊತೆಯಲ್ಲಿ ಬರೋಣವೆಂದರೆ—ನಿನ್ನ ಮನೆಯೂ ಅಷ್ಟೇನೂ ದೂರದಲ್ಲಿಲ್ಲ. ಗುಡ್ ನೈಟ್ (ಅವಳು ಹೊರಗೆ ಹೋಗುವಳು. ಅನಂತರ ಬಾಗಿಲು ಮುಚ್ಚುವನು. ಆಮೇಲೆ ಒಳಗೆ ಬರುವನು.) ಅಹ-ಕೊನೆಗೆ ಅವಳಿಂದ ಬಿಡುಗಡೆಯಾಯಿತಲ್ಲ! ಏನು ಬೇಸರಿಕೆ ಪಡಿಸುವ ಹೆಂಗಸು ಅವಳು!

ನೋರಾ:—ನಿನಗೆ ಆಯಾಸವಾಗಿಲ್ಲವೆ ತೊರ್ವಾಲ್ಡ್?

ಹೆಲ್ಮರ್:—ಇಲ್ಲ ಸ್ವಲ್ಪವೂ ಇಲ್ಲ.

ನೋರಾ:—ನಿದ್ದೆ ಬರುವುದಿಲ್ಲವೆ?

ಹೆಲ್ಮರ್:—ಕೊಂಚವೂ ಇಲ್ಲ. ನಿದ್ದೆಯೆಲ್ಲಾ ಹೋಗಿ ಎಂದೂ ಇಲ್ಲದ ಎಚ್ಚರ ನನಗೆ. ನೀನೋ? ನಿನ್ನ ಮುಖ ನೋಡಿದರೆ ಆಯಾಸವಾಗಿ ನಿದ್ರೆಮುಖವಾಗಿ ಕಾಣುತ್ತೆ.

ನೋರಾ:—ಹೌದು. ನನಗೇನೋ ತುಂಬಾ ಆಯಾಸವಾಗಿದೆ. ಮಲಗಿಕೊಂಡರೆ ಸಾಕೆನ್ನಿಸಿದೆ.

ಹೆಲ್ಮರ್:—ಸರಿ ನೋಡು ನಾನು ಹೇಳಲಿಲ್ಲವೆ? ನಿನ್ನನ್ನು ಅಲ್ಲಿ ಹೆಚ್ಚು ಹೊತ್ತು ಬಿಡದೆ ಕರೆತಂದುದು ಸರಿಯಾಯಿತು.

ನೋರಾ:—ತೊರ್ವಾಲ್ಡ್, ನೀನು ಮಾಡುವುದೆಲ್ಲವೂ ಸರಿತಾನೆ?

ಹೆಲ್ಮರ್:—(ಅವಳ ಹಣೆಯ ಮೇಲೆ ಮುತ್ತಿಟ್ಟು) ನನ್ನ ಪುಟ್ಟ ಪಕ್ಷಿ ಈಗ ನ್ಯಾಯವಾಗಿ ಮಾತನಾಡುತ್ತಿದೆ. ಡಾಕ್ಟರ್ ರ್‍ಯಾಂಕ್ ಈವೊತ್ತು ಬಹಳ ಉತ್ಸಾಹದಿಂದಿದ್ದ—ನೀನು ನೋಡಿದೆಯಾ?

ನೋರಾ:—ಹಾಗೆಯೇ? ಉತ್ಸಾಹದಿಂದಿದ್ದನೆ? ನಾನು ಅವನಸಂಗಡ ಮಾತಾಡಲಿಲ್ಲ.

ಹೆಲ್ಮರ್:—ನಾನೂ ಅಷ್ಟೇನೂ ಮಾತಾಡಲಿಲ್ಲ; ಅವನು ಇಷ್ಟು ಉತ್ಸಾಹದಿಂದ ಇದ್ದದ್ದನ್ನು ನಾನು ಬಹಳ ದಿನಗಳಿಂದ ನೋಡಿರಲಿಲ್ಲ. (ಅವಳನ್ನು ದೃಷ್ಟಿಸಿ ನೋಡಿ ಅವಳ ಹತ್ತಿರ ಸರಿಯುವನು) ಮನೆಯಲ್ಲಿ ನಾವಿಬ್ಬರೇ ಇರುವುದು ಎಷ್ಟು ಆನಂದ! ನಿನ್ನೊಡನೆ ನಾನೊಬ್ಬನೇ ಇರುವುದು—ನನ್ನ ಸೊಬಗಿನರಗಿಣಿಯೊಡನೆ!

ನೋರಾ:—ನನ್ನನ್ನು ಹಾಗೆ ನೋಡಬೇಡ, ತೊರ್ವಾಲ್ಡ್.

ಹೆಲ್ಮರ್:—ನನ್ನ ಭಾಗ್ಯವನ್ನು ನಾನೇಕೆ ನೋಡಕೂಡದು? ನನಗೆ ಸೇರಿದ ನನ್ನ ಸ್ವಂತದ ಈ ರೂಪ ಲಾವಣ್ಯಗಳನ್ನೇಕೆ ನೋಡಕೂಡದು?

ನೋರಾ:—(ಮೇಜಿನ ಬೇರೊಂದು ಕಡೆ ಸರಿದು) ಈ ರಾತ್ರಿ ಅಂಥಾ ಉಪಚಾರದ ಮಾತುಗಳನ್ನೇನೂ ಹೇಳಬೇಡ.

ಹೆಲ್ಮರ್:—(ಅವಳನ್ನು ಹಿಂಬಾಲಿಸಿ) ಟರ್ರಾಟೆಲ್ಲಾ ಪ್ರಹರ್ಷವು ನಿನ್ನ ಮೈಯಲ್ಲಿ ಇನ್ನೂ ತುಂಬಿದೆ. ಅದರಿಂದ ನನ್ನ ಮನಸ್ಸನ್ನು ಇನ್ನಷ್ಟು ಬಲವಾಗಿ ಸೆಳೆಯುತ್ತಿದ್ದೀಯೆ (ಮೆಲ್ಲನೆ) ಸ್ವಲ್ಪ ಹೊತ್ತಿನೊಳಗೆ ಮನೆಯಲ್ಲಾ ನಿಶ್ಶಬ್ದವಾಗುತ್ತೆ.

ನೋರಾ:—ಆಗಲಿ.

ಹೆಲ್ಮರ್:—ಆಗುತ್ತೆ. ನನ್ನ ಮುದ್ದುಗಿಳಿಯೆ. ನನ್ನ ಮನಸ್ಸಿನಲ್ಲಿರುವುದನ್ನು ಹೇಳುವೆನು ಕೇಳು. ಯಾವುದಾದರೂ ಸಂತೋಷ ಕೂಟಕ್ಕೆ ಹೋದೆನೆಂದರೆ ನಾನು ಯಾತಕ್ಕೆ ಮಿತಭಾಷಿಯಾಗಿ, ನಿನ್ನ ಹತ್ತಿರ ಸಲಿಗೆಯಿಂದ ಸರಿಯದೆ, ಓರೆಗಣ್ಣಿನಿಂದಲೆ ನಿನ್ನನ್ನು ಆಗಿಂದಾಗ್ಗೆ ನೋಡುತ್ತಿರುತ್ತೇನೆಂಬುದು ಗೊತ್ತೆ? ನಾನು ಯಾಕೆ ಹಾಗೆ ಮಾಡುತ್ತೇನೆ ಗೊತ್ತೆ? ಯಾಕೆಂದರೆ ನಾನು ಮನಸ್ಸಿನಲ್ಲಿ ನಾವಿಬ್ಬರೂ ಪರಸ್ಪರಾನುರಾಗಿಗಳಾಗಿದ್ದೇವೆಂದೂ, ನನ್ನನ್ನು ಮದುವೆಯಾಗಲು ರಹಸ್ಯವಾಗಿ ಮಾತುಕೊಟ್ಟಿದ್ದೀಯೆಂದೂ, ನಮ್ಮಿಬ್ಬರ ಏಕಾಂತಗಳು ಮತ್ತಾರಿಗೂ ತಿಳಿದಿಲ್ಲವೆಂತಲೂ ಭಾವಿಸುತ್ತೇನೆ.

ನೋರಾ:—ಹೌದು. ಹೌದು. ನನ್ನನ್ನೇ ಸದಾ ಧ್ಯಾನಮಾಡುತ್ತಿರುತ್ತೀಯೆಂದು ನನಗೆ ಚೆನ್ನಾಗಿ ಗೊತ್ತು.

ಹೆಲ್ಮರ್:—ನಾವು ಅನಂತರ ಮನೆಗೆ ಬರುವ ಸಮಯದಲ್ಲಿ ನಿನ್ನ ಸುಂದರವಾದ ಭುಜಗಳ ಮೇಲೆ ಶಾಲನ್ನು ಹೊದಿಸುವಾಗ್ಗೆ—ನಿನ್ನ ರಮಣೀಯವಾದ ಕೊರಳನ್ನು ಮುಚ್ಚುತ್ತಿರುವಾಗ್ಗೆ—ನೀನು ನನ್ನ ಪುಟ್ಟ ಹೆಂಡತಿಯೆಂದೂ, ಪ್ರಥಮಸಮಾಗಮಕ್ಕೆ ನನ್ನ ಮನೆಗೆ ನಿನ್ನನ್ನು ಕರೆತಂದಿದೇನೆಂದೂ—ನಿನ್ನ ಜೊತೆಯಲ್ಲಿ ಒಬ್ಬನೇ ಇರುವುದು ಅದೇ ಮೊದಲನೇ ಸಾರಿಯೆಂದೂ—ಇನ್ನು ಯಾರ ಅಡಚಣೆಯೂ ಇಲ್ಲದೆ ಲಜ್ಜಾಪೂರಿತಳಾದ

ನನ್ನ ಪ್ರೇಯಸಿಯೊಡನೆ ಇರಬಹುದೆಂದೂ-ಅನೇಕ ರೀತಿ ಯಲ್ಲಿ ಯೋಚನೆಮಾಡುತ್ತಿರುತ್ತೇನೆ. ಈ ದಿನವೆಲ್ಲ ನಿನ್ನ ಜೊತೆಯಲ್ಲಿ ಹಾಗಿರಬೇಕೆಂದು ಹಂಬಲಿಸುತ್ತಿದ್ದೇನೆ. ನೀನು ಟರ್ರಾಟೆಲ್ಲಾ ನರ್ತನಮಾಡುತ್ತಿರುವಾಗ್ಗೆ ಮರುಳು ಮಾಡುವ ನಿನ್ನ ದೇಹ ವಿನ್ಯಾಸವು ನನ್ನ ರಕ್ತವನ್ನು ಕುದಿಸಿಬಿಟ್ಟಿತು. ಅದನ್ನು ತಡೆಯಲಾರದೆ ನಿನ್ನನ್ನು ಬಲವಂತ ಮಾಡಿ ಕರೆದು ಕೊಂಡು ಬಂದೆ, ಈಗ ಕಾರಣ ತಿಳಿಯಿತೆ ?

ನೋರಾ :—ದೂರ ಹೋಗು, ತೊರ್ವಾಲ್ಡ್ ! ನನ್ನನ್ನು ಸುಮ್ಮನೆ -- ಬಿಡು -- ಬೇಡ, ನನಗೇನೋ --

ಹೆಲ್ಮರ್:—ಅದೇನದು ? ಏನೋ ಹುಡುಗಾಟ ಮಾಡುತ್ತಿದ್ದೀಯೆ. ನೋರಾ ! ನಿನಗೆ ಬೇಡ ? ನಿನಗೆ ಬೇಡ ? ಇದೇನಿದು ? ನಾನು ನಿನ್ನ ಗಂಡನಲ್ಲವೆ-? (ಯಾರೋ ಬಾಗಿಲು ತಟ್ಟಿದಂತೆ ಶಬ್ದ ವಾಗುವುದು.)

ನೋರಾ:—(ಬೆದರಿ) ಕೇಳಿದೆಯಾ—?

ಹೆಲ್ಮರ್:—(ಹಜಾರಕ್ಕೆ ಹೋಗಿ) ಯಾರದು ?

ರ್‍ಯಾಂಕ್:—(ಹೊರಗಿನಿಂದ) ನಾನು. ಒಂದು ಕ್ಷಣ ಒಳಗೆ ಬರಬಹುದೆ?

ಹೆಲ್ಮರ್:—(ಸಿಟ್ಟಿನಿಂದ ಪಿಸುಗುಟ್ಟುತ್ತಾ) ಇವನಿಗೇನು ಬೇಕು, ಈ ಅರ್ಧರಾತ್ರಿಯಲ್ಲಿ ? (ಗಟ್ಟಿಯಾಗಿ) ಒಂದು ನಿಮಿಷ ತಾಳು. (ಬೀಗವನ್ನು ತೆಗೆದು) ಒಳಕ್ಕೆ ಬಾ. ನಮ್ಮ ಮನೆದಾಟಿ ಹೊರಟು ಹೋಗದೆ ಒಳಗೆ ಬಂದುದು ನಿನ್ನ ವಿಶ್ವಾಸ.

ರ್‍ಯಾಂಕ್:—ನಿನ್ನ ಧ್ವನಿ ಕೇಳಿಸಿದಂತಾಯಿತು, ಒಳಗೆ ಬಂದು ನೋಡಿಕೊಂಡು ಹೋಗೋಣವೆಂದು ತೋರಿತು. (ಜಾಗ್ರತೆ ಯಿಂದ ಮನೆಯ ಸುತ್ತಲೂ ನೋಡಿ) ಆಹಾ—ರೂಢಿಯಾಗಿ ಒಗ್ಗಿದ ಚಿಕ್ಕಮನೆ! ಇಲ್ಲಿ ನೋಡಿದರೆ ನೀವಿಬ್ಬರೂ ಸಂತೋ ಷದಿಂದ ನೆಮ್ಮದಿಯಾಗಿರುವಂತೆ ಕಾಣುತ್ತೆ.

ಹೆಲ್ಮರ್:--ನೀನೂ ಕೂಡ ಮಹಡಿಯಮೇಲೆ ನಿನ್ನ ಯೋಗಕ್ಷೇಮ ವನ್ನು ಚೆನ್ನಾಗಿ ನೋಡಿಕೊಂಡ ಹಾಗೆ ಕಾಣಿಸಿತು.

ರ್ಯಾಂಕ್:—ಓಹೋ! ಸೊಗಸಾಗಿ. ಯಾಕೆ ಕೂಡದು? ಪ್ರಪಂಚ ದಲ್ಲಿರುವ ಸುಖವನ್ನೆಲ್ಲಾ ಮನುಷ್ಯನಾದವನು ಯಾತಕ್ಕೆ ಅನುಭವಿಸಕೂಡದು?—ತನ್ನ ಶಕ್ತ್ಯನುಸಾರವಾಗಿ ಶಕ್ತಿಯು ಳಿದಿರುವ ತನಕ? ವೈನ್ - - (Wine) ಬಹಳ ಚೆನ್ನಾಗಿತ್ತು.

ಹೆಲ್ಮರ್:—ಅದರಲ್ಲೂ ಷಾಂಪೇನ್.

ರ್ಯಾಂಕ್:—ಅದನ್ನೂ ನೋಡುತ್ತಾ ಇದ್ದೆಯಾ? ನಾನು ಎಷ್ಟು ಮುಗಿಸಿದೆನೋ ಯಾರಾದರೂ ಹೇಳಿದರೆ ನಾನು ನಂಬಲಾರೆ.

ನೋರಾ:—ತೊರ್ವಾಲ್ಡನೂ ಕೂಡ ಬಹಳ ಷಾಂಪೇನ್ ಕುಡಿದನು.

ರ್ಯಾಂಕ್:—ನಿಜವಾಗಿ—?

ನೋರಾ:—ಹೌದು. ಕುಡಿದನಂತರ ಅವನು ಯಾವಾಗಲೂ ಉಲ್ಲಾ ಸದಿಂದಿರುತ್ತಾನೆ.

ರ್ಯಾಂಕ್:—ಕಷ್ಟಪಟ್ಟು ದುಡಿದನಂತರ ಸಾಯಂಕಾಲ ಯಾತಕ್ಕೆ ಸಂತೋಷದಿಂದಿರಕೂಡದು?

ಹೆಲ್ಮರ್:—ಕಷ್ಟಪಟ್ಟು ದುಡಿದ ಮೇಲೆ—? ನಾನು ಈ ಹೊತ್ತು ಹಾಗೇನೂ ಜಂಭ ಕೊಚ್ಚಿಕೊಳ್ಳಲಾರೆ.

ರ್ಯಾಂಕ್:—(ಅವನ ಬೆನ್ನಿನ ಮೇಲೆ ತಟ್ಟಿ) ನಾನು ಕೊಚ್ಚಿಕೊಳ್ಳುತ್ತೇನೆ.

ನೋರಾ:—ಡಾಕ್ಟರ್ ರ್ಯಾಂಕ್! ಈ ದಿನವೆಲ್ಲಾ ಶಾಸ್ತ್ರಶೋಧನೆಯಲ್ಲಿ ತೊಡಗಿದ್ದಂತೆ ಕಾಣುತ್ತೆ, ಅಲ್ಲವೆ?

ರ್ಯಾಂಕ್:—ನೀನು ಹೇಳುವುದು ಸರಿ.

ಹೆಲ್ಮರ್:—ನೋಡಪ್ಪ ಈ ತಮಾಷೆ-ನಮ್ಮ ಪುಟ್ಟ ನೋರಾ ಶಾಸ್ತ್ರ ಶೋಧನೆಯ ವಿಷಯ ಮಾತಾಡುತ್ತಿದ್ದಾಳೆ!

ನೋರಾ:—(ರ್ಯಾಂಕನ್ನು ಕುರಿತು) ಅದರ ಫಲದ ವಿಷಯದಲ್ಲಿ ನಿನ್ನನ್ನು ಅಭಿನಂದಿಸಬಹುದೆ?

ರ್ಯಾಂಕ್:—ಅಗತ್ಯವಾಗಿ ಆಗಬಹುದು.

ನೋರಾ:—ಹಾಗಾದರೆ ಅದು ಅನುಕೂಲವಾಗಿತ್ತೆ?

ರ್ಯಾಂಕ್:—ಅತ್ಯುತ್ತಮವಾಗಿತ್ತು—ವೈದ್ಯ ರೋಗಿ ಇಬ್ಬರಿಗೂ—ನಿಸ್ಸಂಶಯವಾಗಿ!

ನೋರಾ:—(ಬೇಗನೆ, ಪರೀಕ್ಷೆ ಮಾಡುವಂತೆ) ನಿಸ್ಸಂಶಯ?

ರ್ಯಾಂಕ್:—ಕೊಂಚವೂ ಅನುಮಾನವಿಲ್ಲದಂತೆ ನಿಸ್ಸಂಶಯ. ಆದ್ದರಿಂದ ಸಾಯಂಕಾಲವನ್ನು ಸಂತೋಷದಿಂದ ಕಳೆಯಲು ನಾನು ಅರ್ಹನಲ್ಲವೆ?

ನೋರಾ:—ಹೌದು ಡಾಕ್ಟರ್ ರ್ಯಾಂಕ್, ಸಂಪೂರ್ಣವಾಗಿ ನೀನು ಅರ್ಹನು.

ಹೆಲ್ಮರ್:—ನಾನು ಹಾಗೆಯೇ ಯೋಚಿಸುತ್ತೇನೆ-ಮರುದಿನ ಪ್ರಾತಃಕಾಲ ಅದಕ್ಕೇನೂ ಪಾವತಿ ಮಾಡಬೇಕಾಗದೇ ಇದ್ದಲ್ಲಿ.

ರ್ಯಾಂಕ್:—ಈ ಜೀವಮಾನದಲ್ಲಿ ಪಾವತಿಮಾಡದಿದ್ದರೆ ಏನು ತಾನೆ ಸಿಕ್ಕುವುದು?

ನೋರಾ:—ಡಾಕ್ಟರ್ ರ್ಯಾಂಕ್, ಫ್ಯಾನ್ಸಿ ವೇಷದ ನೃತ್ಯ ಕಂಡರೆ ನಿನಗೆ ಇಷ್ಟೆಯೆ?

ರ್ಯಾಂಕ್:—ಥಳಥಳಿಸುವ ನೇತ್ರಾನಂದಕರವಾದ ಉಡುಪುಗಳನೇಕವಿದ್ದರೆ.

ನೋರಾ:—ಹೇಳು ಮತ್ತೆ, ಮುಂದಿನ ಸಮಯಕ್ಕೆ ನಾವಿಬ್ಬರೂ ಯಾವ ಉಡುಪನ್ನು ಧರಿಸೋಣ?

ಹೆಲ್ಮರ್:—ಎಲೆ ಚಂಚಲೆ! ಆಗಲೇ ಮುಂದಿನದನ್ನು ಕುರಿತು ಯೋಚಿಸುತ್ತಿರುವೆಯಾ?

ರ್ಯಾಂಕ್:—ನಾವಿಬ್ಬರೆ? ಅದಕ್ಕೇನಂತೆ ಹೇಳುತ್ತೇನೆ. ನೀನು ನನ್ನನ್ನು ಕಾಯುವ ದೇವತೆಯಂತೆ—

ಹೆಲ್ಮರ್:—ಸರಿ. ನಿನ್ನನ್ನು ಕಾಯುವ ದೇವತೆಗೆ ಅನುರೂಪವಾದ ಉಡುಪು ಯಾವುದಿರಬೇಕು?

ರ್ಯಾಂಕ್:—ನಿನ್ನ ಹೆಂಡತಿಯು ತನ್ನ ನಿತ್ಯಗಟ್ಟಲೆಯ ಉಡುಪನ್ನು ಧರಿಸಲಿ!

ಹೆಲ್ಮರ್:—ನಿಜವಾಗಿಯೂ ಆ ಮಾತನ್ನು ಚಾತುರ್ಯದಿಂದ ತಿರುಗಿಸಿದೆ. ನೀನು ಯಾರ ಹಾಗೆ ಉಡುಪನ್ನು ಧರಿಸುತ್ತೀಯೆ?

ರ್ಯಾಂಕ್:—ಅದನ್ನು ನಾನು ಆಗಲೇ ಗೊತ್ತುಮಾಡಿದ್ದೇನೆ.

ಹೆಲ್ಮರ್:—ಏನದು?

ರ್ಯಾಂಕ್:—ಮುಂದಿನ ಫ್ಯಾನ್ಸಿ ಡ್ರೆಸ್ ನೃತ್ಯದ ಸಮಯದಲ್ಲಿ ನಾನು ಅದೃಶ್ಯನಾಗಿರುತ್ತೇನೆ.

ಹೆಲ್ಮರ್:—ಅದು ಒಂದು ಒಳ್ಳೆ ಹಾಸ್ಯ.

ರ್ಯಾಂಕ್:—ಒಂದು ದೊಡ್ಡ ಕರಿ ಟೋಪಿ ಇದೆ. ಅದೃಶ್ಯನನ್ನಾಗಿ ಮಾಡತಕ್ಕಂಥ ಟೋಪಿಗಳಿವೆಯೆಂದು ಕೇಳಿದ್ದೀಯಾ? ಅಂಥಾದ್ದೊಂದನ್ನು ಧರಿಸಿದರೆ ನೀನು ಯಾರ ಕಣ್ಣಿಗೂ ಗೋಚರನಾಗುವುದಿಲ್ಲ.

ಹೆಲ್ಮರ್:—(ಬಂದ ನಗುವನ್ನು ತಡೆದು) ಹೌದು, ನಿನ್ನ ಮಾತು ನಿಜ.

ರ್ಯಾಂಕ್:—ಅದೆಲ್ಲಾ ಹಾಗಿರಲಿ; ನಾನು ಬಂದ ಕೆಲಸವನ್ನೇ ಮರೆತು ಬಿಟ್ಟಿದ್ದೆ. ಹೆಲ್ಮರ್, ಒಂದು ಚುಟ್ಟಾವನ್ನು ಕೊಡು-ಹ್ಯಾವನ್ನಾದೇಶದ ಕರಿ ಚುಟ್ಟವೊಂದನ್ನು.

ಹೆಲ್ಮರ್:—ಅಗತ್ಯವಾಗಿ-ಸಂತೋಷದಿಂದ. (ಚುಟ್ಟಾ ಪೆಟ್ಟಿಗೆಯನ್ನು ಮುಂದೆ ಹಿಡಿಯುವನು)

ರ್ಯಾಂಕ್:—(ಒಂದು ಚುಟ್ಟಾವನ್ನು ತೆಗೆದುಕೊಂಡು ತುದಿಯನ್ನು ಕತ್ತರಿಸುವನು) ತುಂಬಾ ಧನ್ಯನಾದೆ.

ನೋರಾ:—(ಒಂದು ದೀಪದ ಕಡ್ಡಿಯನ್ನು ಹಚ್ಚಿ ಹಿಡಿದು) ನಾನು ಬೆಂಕಿಯನ್ನು ಹಚ್ಚುತ್ತೇನೆ.

ರ್ಯಾಂಕ್:—ಧನ್ಯ-ಧನ್ಯನಾದೆ. (ಚುಟ್ಟಾವನ್ನು ಹತ್ತಿಸಿಕೊಳ್ಳಲು ಸರಿಯಾಗಿ ಬೆಂಕಿಯನ್ನು ಹಿಡಿಯುವಳು) ಇನ್ನು ಹೋಗಿ ಬರುತ್ತೇನೆ. ಗುಡ್-ಬೈ. (Good-bye)

ಹೆಲ್ಮರ್:—ಗುಡ್‌ಬೈ–ಗುಡ್ ಬೈ. ಮಿತ್ರವರ್ಯನೆ.

ನೋರಾ:—ಚೆನ್ನಾಗಿ ನಿದ್ರೆಮಾಡು ಡಾಕ್ಟರ್ ರ್‍ಯಾಂಕ್—

ರ್‍ಯಾಂಕ್:—ಆ ಕೋರಿಕೆಗೆ ಅತ್ಯಂತ ಧನ್ಯವಾದಗಳು—

ನೋರಾ:—ನನಗೂ ಅದನ್ನೇ ಹಾರೈಸು.

ರ್‍ಯಾಂಕ್:—ನಿನಗೆ? ಆಗಬಹುದು. ನಾನು ಚೆನ್ನಾಗಿ ನಿದ್ರೆಮಾಡಬೇಕೆಂದು ನಿನ್ನ ಆಶಯವಿದ್ದರೆ! ಅಲ್ಲದೆ ಬೆಳಕು ಕೊಟ್ಟಿದ್ದಕ್ಕೆ ಪುನಃ ಧನ್ಯವಾದಗಳು. (ಅವರಿಬ್ಬರ ಕಡೆಗೂ ತಲೆಯಾಡಿಸಿ ಹೋಗುವನು.)

ಹೆಲ್ಮರ್:—ಅವನು ಮಿತಿಮೀರಿ ಪಾನ ಮಾಡಿರುವಂತೆ ಕಾಣುತ್ತೆ.

ನೋರಾ:—(ಅನ್ಯ ಮನಸ್ಕಳಾಗಿ) ಇರಬಹುದು. (ಹೆಲ್ಮರನು ಬೀಗದ ಕೈಜೊಂಪೆಯೊಂದನ್ನು ಜೋಬಿನಿಂದ ತೆಗೆದು ಹಜಾರದ ಕಡೆಗೆ ಹೋಗುವನು) ತೊರ್‍ವಾಲ್ಡ್, ಅಲ್ಲೇನು ಕೆಲಸ ನಿನಗೆ?

ಹೆಲ್ಮರ್:—ಟಪಾಲು ಪೆಟ್ಟಿಗೆಯನ್ನು ಬರಿದು ಮಾಡುವುದು; ಅದು ಭರ್ತಿಯಾಗಿದೆ; ನಾಳೆ ಬೆಳಿಗ್ಗೆ ವರ್ತಮಾನ ಪತ್ರಿಕೆಗಳಿಗೆ ಸ್ಥಳವಿರುವುದಿಲ್ಲ.

ನೋರಾ:—ರಾತ್ರಿಯೆಲ್ಲಾ ಕೆಲಸಮಾಡುತ್ತೀಯೇನು?

ಹೆಲ್ಮರ್:—ಕೆಲಸಮಾಡುವುದಿಲ್ಲವೆಂದು ನಿನಗೇ ಗೊತ್ತು. ಇದೇನಿದು? ಯಾರೋ ಬೀಗದ ತಂಟೆಗೆ ಹೋಗಿದ್ದಾರೆ.

ನೋರಾ:—ಬೀಗದತಂಟೆಗೆ—?

ಹೆಲ್ಮರ್:—ಹೌದು, ಯಾರೋ ಅದರ ಗೋಜಿಗೆ ಹೋಗಿದ್ದಾರೆ. ಇದಕ್ಕೇನರ್ಥವಿರಬಹುದು? ಮನೆ ಹೆಣ್ಣಾಳಿಗೆ ಇಷ್ಟು ಧೈರ್ಯ—ಇಲ್ಲೊಂದು ತುರುಬಿನ ತಂತಿ ಇದೆ. ನೋರಾ, ನಿನ್ನದು!

ನೋರಾ:—ಹಾಗಾದರೆ ಮಕ್ಕಳು ಯಾರೋ—

ಹೆಲ್ಮರ್:—(ತಟಕ್ಕನೆ) ಹಾಗಾದರೆ ಮಕ್ಕಳಿಗೆ ಇಂಥಾ ಚಾಳುಗಳು ಬರದಂತೆ ನೀನು ನೋಡಿಕೊಳ್ಳಬೇಕು. ಅಗೋ ಕಡೆಗೆ

ಬೀಗ ತೆಗೆಯಿತು. (ಪೆಟ್ಟಿಗೆಯೊಳಗಿದ್ದದ್ದನ್ನೆಲ್ಲಾ ತೆಗೆದು ಅಡಿಗೆ ಮನೆ ಕಡೆ ಕೂಗುತ್ತಾನೆ) ಹೆಲ್ಲೀ, ಹೆಲ್ಲೀ, ಮುಂಬಾಗಿಲಿನ ದೀಪ ಆರಿಸು. ಅವನ್ನು ನೋಡು. ಒಂದು ರಾಶಿ ಇದೆ. (ಅವುಗಳನ್ನು ತಿರುವಿ ಹಾಕುತ್ತಾ) ಇದೇನಿದು ?

ನೋರಾ:--ಆ ಕಾಗದ—! ಇಲ್ಲ, ಟೊರ್ವಾಲ್ಡ್, ಇಲ್ಲ.

ಹೆಲ್ಮರ್:—ಎರಡು ಹೆಸರಿನ ಚೀಟಿಗಳು—ಎರಡೂ ಡಾಕ್ಟರ್ ರ್‍ಯಾಂಕಿನವು.

ನೋರಾ:—ಡಾಕ್ಟರ್ ರ್‍ಯಾಂಕಿನವೆ ?

ಹೆಲ್ಮರ್:—(ನೋಡುತ್ತಾ) ಡಾಕ್ಟರ್ ರ್‍ಯಾಂಕ್, ಅವು ಮೇಲ್ಗಡೆ ಇದ್ದುವು. ಅವನು ಹೋಗುತ್ತಾ ದಾರಿಯಲ್ಲಿ ಪೆಟ್ಟಿಗೆಯಲ್ಲಿ ಹಾಕಿರಬೇಕು.

ನೋರಾ:—ಅವುಗಳಮೇಲೆ ಏನಾದರೂ ಬರೆದಿದೆಯೆ ?

ಹೆಲ್ಮರ್:—ಹೆಸರಿನಮೇಲೆ ಕರಿ ಶಿಲುಬೆಯ ಗುರುತಿದೆ. ನೋಡು—ಇದೇನಿದು ಅಶುಭಸೂಚನೆ ? ತನ್ನ ಮರಣವನ್ನು ಸಾರುತ್ತಿದ್ದನೆಂದು ಕಾಣುವುದಲ್ಲ !

ನೋರಾ:—ಅವನ ಅಭಿಪ್ರಾಯವು ಅದೆ !

ಹೆಲ್ಮರ್:—ಏನು ? ಇದರ ವಿಷಯ ನಿನಗೇನಾದರೂ ಗೊತ್ತೆ ? ಅವನು ನಿನಗೇನಾದರೂ ಹೇಳಿದ್ದನೆ ?

ನೋರಾ:—ಹೌದು, ಹೆಸರಿನ ಚೀಟಿ ಬಂದರೆ ಸಾಯುವುದಕ್ಕೆ ಮುಂಚಿತವಾಗಿ ನಮ್ಮಪ್ಪಣೆಯನ್ನು ತೆಗೆದುಕೊಂಡಂತೆ ಎಂದರ್ಥ. ಇನ್ನುಮೇಲೆ ತನ್ನ ಮನೆಯಿಂದ ಹೊರಗೆ ಸುಳಿಯದೆ ಒಳಗೆ ಅಡಗಿಕೊಂಡು ಸಾಯುವನು.

ಹೆಲ್ಮರ್:—ಅಯ್ಯೋ ಮಿತ್ರನೆ ! ಬಹಳ ದಿನ ನಮ್ಮ ಜೊತೆಯಲ್ಲಿರುವುದಿಲ್ಲವೆಂದು ನನಗೇನೋ ಗೊತ್ತಿತ್ತು. ಆದರೆ ಇಷ್ಟು ಜಾಗ್ರತೆಯಾಗಿ ! ಇನ್ನುಮೇಲೆ ಅವನು ಘಾಸಿಹೊಂದಿದ ಪ್ರಾಣಿಯಂತೆ ಅಡಗಿಕೊಂಡಿರುತ್ತಾನೆ.

ನೋರಾ:—ಅದು ಸಂಭವಿಸಲೇಬೇಕಾದರೆ—ಒಬ್ಬರೊಡನೆ ಒಂದು ಮಾತಿಲ್ಲದೆ ಆಗಿಬಿಡುವುದು ಅತ್ಯುತ್ತಮವಾದದ್ದು—ಅಲ್ಲವೆ ತೊರ್ವಾಲ್ಡ್ ?

ಹೆಲ್ಮರ್:—(ಶತಪಥ ಸುತ್ತುತ್ತಾ) ನಮ್ಮಲ್ಲಿ ಅವನಿಗೆ ಬಹಳ ಹೊಂದಾಣಿಕೆಯಿತ್ತು. ನಮ್ಮ ಜೀವನದ ಸಂಬಂಧವನ್ನು ತೊರೆದು ಹೋದನೆಂದರೆ ನಂಬುವುದೇ ಕಷ್ಟ. ನಮ್ಮ ಸಂತೋಷ ಸೂರ್ಯನ ಹಿಂದುಗಡೆ ಅವನ ನರಳಾಟ, ಅವನ ಒಂಟಿಯಾಗಿರುವಿಕೆ ಇವುಗಳು ಕಪ್ಪು ಮೇಘರಾಶಿಯಂತಿದ್ದುವು. ಈಗ ಸಂಭವಿಸಿರುವುದೇ ಒಂದುವೇಳೆ ಸರಿಯೆಂದು ತೋರುತ್ತೆ—ಅವನಿಗಾದರೂ ಸರಿಯಾಗಿರುವುದು. (ಸ್ತಬ್ಧನಾಗಿ ನಿಂತು) ನಮಗೂ ಕೂಡ ಇರಬಹುದು ನೋರಾ. ಇನ್ನುಮೇಲೆ ನಮ್ಮಿಬ್ಬರ ಅವಲಂಬನೆ ಹೆಚ್ಚಾಗಿರಬೇಕು. (ತಬ್ಬಿಕೊಂಡುಅವಳನ್ನು) ನನ್ನ ಪ್ರಿಯರಮಣಿ, ನನ್ನ ಮನಸೊಪ್ಪುವಷ್ಟು ಬಿಗಿಯಾಗಿ ನಿನ್ನನ್ನು ತಬ್ಬಲಾರನೆಂದು ತೋರುತ್ತೆ. ನೋರಾ! ನನ್ನ ಮನಸ್ಸಿನಲ್ಲಿ ಏನಿದೆ ಹೇಳಲೆ ? ನೀನು ಒಂದು ದೊಡ್ಡ ಅಪಾಯಕ್ಕೆ ಸಿಕ್ಕಬೇಕು. ಆಗ ನನ್ನ ಜೀವರಕ್ತವನ್ನೆಲ್ಲಾ ಚೆಲ್ಲಿ ಸೂಸಿ ನನ್ನ ಸರ್ವಸ್ವವನ್ನೂ ಕೊಟ್ಟು ನಿನ್ನನ್ನು ಕಾಪಾಡಬೇಕೆಂದು—

ನೋರಾ:—(ಬಿಡಿಸಿಕೊಂಡು ಸ್ಪಷ್ಟವಾಗಿಯೂ ಖಂಡಿತವಾಗಿಯೂ ಮಾತನಾಡುತ್ತಾ) ನೀನು ಹೋಗಿ ಇನ್ನು ನಿನ್ನ ಕಾಗದಗಳನ್ನು ಓದಬೇಕು.

ಹೆಲ್ಮರ್:—ಇಲ್ಲ-ಇಲ್ಲ-ಈ ರಾತ್ರಿ ಬೇಡ. ನಿನ್ನೊಡನೆ ಈ ರಾತ್ರಿಯನ್ನು ಕಳೆಯಬೇಕೆಂದಿದ್ದೇನೆ.

ನೋರಾ:—ನಿನ್ನ ಸ್ನೇಹಿತನ ಮರಣವನ್ನು ಯೋಚಿಸುತ್ತಾ—?

ಹೆಲ್ಮರ್:—ನೀನು ಹೇಳಿದ್ದು ಯುಕ್ತವಾಗಿದೆ. ಅದು ನಮ್ಮಿಬ್ಬರ ಮನಸ್ಸಿಗೂ ಹಚ್ಚಿದೆ. ಅಶುಭವೊಂದು ನಮ್ಮಿಬ್ಬರ ಮಧ್ಯೆ ಕುಳಿತಿದೆ—ಮರಣದ ಯೋಚನೆ ಅದರ ಭಯಾನಕ ಅವಸ್ಥೆ

ಗಳು. ಪ್ರಯತ್ನಮಾಡಿ ಅವುಗಳನ್ನು ನಮ್ಮ ಮನಸ್ಸಿನಿಂದ ಓಡಿಸಬೇಕು. ಅಲ್ಲಿಯವರೆಗೆ ನಾವಿಬ್ಬರೂ ನಮ್ಮ ನಮ್ಮ ಚಿಕ್ಕಮನೆಗಳಲ್ಲೇ ಮಲಗೋಣ.

ನೋರಾ:—(ಅವನ ಕತ್ತಿನಿಂದ ತೂಗಾಡಿಕೊಂಡು) ಗುಡ್ ನೈಟ್ ತೊರ್ವಾಲ್ಡ್, ಗುಡ್ ನೈಟ್!

ಹೆಲ್ಮರ್:—(ಅವಳ ಹಣೆಯಮೇಲೆ ಮುತ್ತಿಟ್ಟು) ನನ್ನ ಪುಟ್ಟಪಕ್ಷಿಗೆ ಗುಡ್ ನೈಟ್. ಚೆನ್ನಾಗಿ ನಿದ್ರೆಮಾಡು ನೋರಾ. ನಾನು ಇನ್ನು ಕಾಗದಗಳನ್ನು ಓದಲು ಒಳಗೆ ಹೋಗುತ್ತೇನೆ. (ಕಾಗದಗಳನ್ನು ತೆಗೆದುಕೊಂಡು ತನ್ನ ಚಿಕ್ಕಮನೆಗೆ ಹೋಗಿ ಬಾಗಿಲು ಹಾಕಿಕೊಳ್ಳುವನು)

ನೋರಾ:—(ಪರವಶಳಾಗಿ ಸುಮ್ಮನೆ ಗುರಿಯಿಲ್ಲದೆ ಏನನ್ನೋ ಹುಡುಕುತ್ತಾ ಹೆಲ್ಮರನ ಕರಿಮುಸುಕನ್ನು ಹಿಡಿದು ತನ್ನ ಮೈಸುತ್ತ, ಸುತ್ತಿಕೊಂಡು ಉಸಿರು ಹಿಡಿದ ಧ್ವನಿಯಿಂದ ಬೇಗಬೇಗನೆ ಪಿಸುಗುಟ್ಟುವಳು) ನನ್ನ ಮಕ್ಕಳನ್ನು ನೋಡುವುದಕ್ಕೆ ಕೂಡ ಇಲ್ಲವಾಯಿತಲ್ಲ! ಎಂದೆಂದಿಗೂ ಇಲ್ಲ! ಎಂದೆಂದಿಗೂ ಇಲ್ಲ!! ಆ-ಆ—ಕೊರೆಯುತ್ತಿರುವ ಮಂಜಿನ ನೀರು!-ಕಪ್ಪಗೆ! ನೆಲಗಾಣದಷ್ಟು ಆಳ!! ಮುಗಿದಾದರೂ ಬಿಟ್ಟರೆ! ಈಗ ಅವನಿಗೆ ಸಿಕ್ಕಿತು ಕಾಗದ! ಓದುತ್ತಿದಾನೆ ಈವಾಗ! ಗುಡ್ ಬೈ ತೊರ್ವಾಲ್ಡ್! ಗುಡ್ ಬೈ ನನ್ನ ಕಂದಗಳಿರಾ! (ಹಜಾರದ ಬಾಗಿಲಿನಿಂದಾಚೆಗೆ ಓಡಿಹೋಗಲು ಸಿದ್ಧಳಾದ ಸಮಯಕ್ಕೆ ಹೆಲ್ಮರನು ತನ್ನ ಚಿಕ್ಕಮನೆಯ ಬಾಗಿಲನ್ನು ತ್ವರೆಯಿಂದ ತೆಗೆದು ಕೈಯಲ್ಲಿ ಒಂದು ತೆರೆದ ಕಾಗದವನ್ನು ಹಿಡಿದುಕೊಂಡು ಬಾಗಿಲಲ್ಲೇ ನಿಂತು)

ಹೆಲ್ಮರ್:—ನೋರಾ!

ನೋರಾ—ಆ—!

ಹೆಲ್ಮರ್:—ಇದೇನಿದು? ಈ ಕಾಗದದಲ್ಲಿರುವುದು ನಿನಗೆ ತಿಳಿದಿದೆಯೆ?

ನೋರಾ:—ಹೌದು ನನಗೆ ತಿಳಿದಿದೆ. ನಾನು ಹೋಗುತ್ತೇನೆ.

ಹೆಲ್ಮರ್:—(ಅವಳನ್ನು ತಡೆದು) ಎಲ್ಲಿಗೆ ಹೋಗುವೆ?

ನೋರಾ:—(ಬಿಡಿಸಿಕೊಳ್ಳಲು ಪ್ರಯತ್ನ ಪಡುತ್ತಾ) ನನ್ನನ್ನು ನೀನು ರಕ್ಷಿಸಬೇಡ, ತೊರ್ವಾಲ್ಡ್.

ಹೆಲ್ಮರ್:—(ತಲೆ ತಿರುಗಿದವನಾಗಿ) ನಿಜವೆ? ನಾನು ಈ ಕಾಗದದಲ್ಲಿ ಓದಿದ್ದು ನಿಜವೆ? ಭಯಂಕರ! ಇಲ್ಲ-ಇಲ್ಲ-ಅದು ನಿಜವಾಗಿ ರುವುದು ಅಸಂಭವ!

ನೋರಾ:—ಅದು ನಿಜ. ಪ್ರಪಂಚದ ಎಲ್ಲಾ ವಸ್ತುಗಳನ್ನೂ ಮೀರಿದ ಪ್ರೀತಿಯನ್ನು ನಾನು ನಿನ್ನಲ್ಲಿಟ್ಟಿದ್ದೇನೆ.

ಹೆಲ್ಮರ್:—ಕೆಲಸಕ್ಕೆ ಬಾರದ ತಿಳಿಗೇಡಿತನದ ಸಬೂಬುಗಳಿಂದೇನು ಪ್ರಯೋಜನ!

ನೋರಾ:—(ಅವನ ಕಡೆ ಒಂದು ಹೆಜ್ಜೆಯನ್ನಿಟ್ಟು) ತೊರ್ವಾಲ್ಡ್—

ಹೆಲ್ಮರ್:—ಅಯ್ಯೋ ನೀಚ ಹೆಂಗಸೆ, ಏನು ಮಾಡಿಬಿಟ್ಟೆ?

ನೋರಾ:—ನನ್ನನ್ನು ಬಿಟ್ಟುಬಿಡು. ನಾನು ಹೋಗುವೆನು. ನನ ಗೋಸ್ಕರ ನೀನೇನೂ ವ್ಯಥೆಪಡತಕ್ಕ ಅವಶ್ಯಕವಿಲ್ಲ. ನೀನೇನೂ ನನ್ನ ಅಪವಾದವನ್ನು ಹೊರತಕ್ಕ ಅವಶ್ಯಕವಿಲ್ಲ.

ಹೆಲ್ಮರ್:—ದುಃಖಾವಸಾನ ನಾಟಕದ ವೇಷಗಳೇನೂ ಈಗ ಬೇಕಿಲ್ಲ. (ಬಾಗಿಲು ಬೀಗ ಹಾಕಿಕೊಳ್ಳುವನು) ಇಲ್ಲೇ ಇದ್ದು ಇದರ ವಿವ ರವನ್ನೆಲ್ಲಾ ಹೇಳಬೇಕು. ನೀನು ಮಾಡಿರುವುದರ ಅರ್ಥ ನಿನಗೆ ಗೊತ್ತೆ? ಹೇಳು, ಯಾಕೆ ಸುಮ್ಮನಿದ್ದೀಯೆ? ಉತ್ತರ ಕೊಡು, ನೀನು ಮಾಡಿರುವುದರ ಅರ್ಥ ನಿನಗೆ ಗೊತ್ತೆ?

ನೋರಾ:—(ಅವನನ್ನು ರೆಪ್ಪೆ ಮುಚ್ಚದೆ ನೋಡುತ್ತಾ ಕ್ರಮೇಣ ಹೆಚ್ಚುತ್ತಿರುವ ತಾತ್ಸಾರದ ನೋಟದಿಂದ) ಅದರ ಅರ್ಥವು ಸಂಪೂ ರ್ಣವಾಗಿ ತಿಳಿವಳಿಕೆಗೆ ಬರಲು ಪ್ರಾರಂಭವಾಗಿದೆ.

ಹೆಲ್ಮರ್:—(ಚಿಕ್ಕಮನೆಯಲ್ಲಿ ಅಲ್ಲಿಂದಿಲ್ಲಿಗೆ ಸುತ್ತುತ್ತಾ) ಏನು ಭಯಂಕರ ವಾದ ಎಚ್ಚರಿಕೆ ಇದು! ಕಳೆದ ಎಂಟು ವರ್ಷಗಳೂ ಇವಳು

—ನನ್ನ ಸಂತೋಷ ನನ್ನ ಆನಂದ ನನ್ನ ಹೆಮ್ಮೆಗೆ ಕಾರಣಳಾದವಳು—ಮೋಸಗಾತಿ—ಸುಳ್ಳುಗಾತಿ—ಅಷ್ಟೇ ಅಲ್ಲ—ಅಷ್ಟೇ ಅಲ್ಲ! ಒಬ್ಬ ಪಾತಕಿ! ಬಾಯಲ್ಲಿ ಕೂಡ ಹೇಳಬಾರದ ಹೇಯವಾದ ಕೆಲಸವಾಯಿತಲ್ಲಾ! ಅಯ್ಯೋ ನಾಚಿಕೆ ಕೇಡು-ನಾಚಿಕೆಕೇಡು! (ನೋರಾ ಸುಮ್ಮನಿರುವಳು-ಅವನನ್ನೇ ದುರುದುರನೆ ನೋಡುತ್ತಿರುವಳು) ಹೀಗೇನಾದರೂ ಆಗಬಹುದೆಂದು ನಾನು ಮೊದಲೇ ಊಹಿಸಬೇಕಾಗಿತ್ತು. ಮುಂದಾಲೋಚನೆ ಮಾಡಬೇಕಾಗಿತ್ತು. ನಿನ್ನ ತಂದೆಯ—ಮುಚ್ಚುಬಾಯಿ—ಧರ್ಮವಿರುದ್ಧವಾದ ದುರ್ಮಾರ್ಗ ನಡತೆಗಳೆಲ್ಲಾ ನಿನಗೂ ಬಂದುಬಿಟ್ಟವೆ. ಮತ ಕುಲ ಇವುಗಳೆಲ್ಲಾ ಹೋದುವು. ಸದಾಚಾರ ಜ್ಞಾನವೇ ಇಲ್ಲ. ನಿನ್ನ ತಂದೆಯ ಅಪರಾಧವನ್ನು ಮನ್ನಿಸಿದ್ದಕ್ಕಾಗಿ ನನಗೆ ಎಂಥಾ ಶಿಕ್ಷೆಯಾಯಿತು! ನಿನಗೋಸ್ಕರ ಹಾಗೆ ಮಾಡಿದೆ; ನಿನ್ನ ಪ್ರತ್ಯುಪಕಾರ ಈ ಬಗೆ!

ನೋರಾ:—ಹೌದು-ಅದು ನೀನು ಹೇಳುವಂತೆಯೆ!

ಹೆಲ್ಮರ್:—ಇನ್ನು ನನ್ನ ಸುಖಜೀವನ ಹಾಳಾಯಿತು. ನನ್ನ ಪುರೋಭಿವೃದ್ಧಿಯೆಲ್ಲ ನಾಶವಾಯಿತು. ಯೋಚಿಸುವುದಕ್ಕೇ ದಿಗಲಾಗುತ್ತೆ. ಅನ್ಯಾಯಕ್ಕೆ ಅಂಜದಿರುವ ಒಬ್ಬ ಕೀಳು ಮನುಷ್ಯನ ಕೈಲಿ ಸಿಕ್ಕಿಬಿಟ್ಟೆ! ಅವನು ನನ್ನನ್ನೇನು ಬೇಕಾದರೂ ಮಾಡಬಹುದು; ಏನನ್ನು ಬೇಕಾದರೂ ಕೇಳಬಹುದು—ನಾನು ಒಲ್ಲೆ ಎಂದು ಹೇಳಲಾರೆ. ಬುದ್ಧಿಯಿಲ್ಲದ ಒಬ್ಬ ಹೆಂಗಸಿಗೋಸ್ಕರ ಮಂದಭಾಗ್ಯನಾಗಿ ಕೆಳಗೆ ಬೀಳಬೇಕಾಗಿ ಬಂತು.

ನೋರಾ:—ನಿನ್ನ ದಾರಿಗಡ್ಡವಾಗದೆ ನಾನು ಹೋದನಂತರ ನಿನಗೆ ಬಿಡುಗಡೆಯಾಗುವುದು.

ಹೆಲ್ಮರ್:—ಚಮತ್ಕಾರದ ಮಾತುಗಳೇನೂ ಬೇಡ! ನಿನ್ನ ತಂದೆಯು ಮಾತಿನಲ್ಲಿ ಬಹಳ ಚತುರ! ನನ್ನ ದಾರಿಗಡ್ಡವಾಗದೇ ನೀನು ಹೊರಟುಹೋದರೂ ನನಗೇನು ಉಪಯೋಗ? ಏನೇನೂ

ಇಲ್ಲ! ಅವನು ಈ ವಿಷಯವನ್ನು ಎಲ್ಲೆಲ್ಲೂ ಹರಡಿಬಿಡು ತ್ತಾನೆ; ಅವನು ಹಾಗೆ ಮಾಡಿದೊಡನೆಯೇ ಜನಗಳು ನಾನೂ ಕೂಡ ಗುಟ್ಟಾಗಿ ನಿನ್ನ ಅಕೃತ್ಯದಲ್ಲಿ ಭಾಗಿಯಾಗಿದ್ದೆನೆಂದು ಭಾವಿಸಬಹುದು. ಸುಮಾರು ಈ ಕೆಲಸಕ್ಕೆ ಮುಖ್ಯ ಕಾರ ಣನೇ ನಾನೆಂದು ಕೆಲವರು ತಿಳಿಯಬಹುದು. ನಾನೇ ನಿನಗೆ ದುರ್ಬೋಧನೆಯನ್ನು ಮಾಡಿದೆನೆಂದು ;- ಈ ಸಂಪತ್ತಿಗೆ ನಾನು ನಿನಗೆ ಕೃತಜ್ಞನಾಗಿರಬೇಕು! ಇದಕ್ಕೋಸ್ಕರವೇ ನಿನ್ನನ್ನು ಒಲಿದಾಡಿಸಿ ಮುದ್ದಿಸಿ ಇಟ್ಟುಕೊಂಡದ್ದು. ಈಗಲಾದರೂ ನನ್ನ ತಲೆಯ ಮೇಲೆ ಕಲ್ಲು ಹಾಕಿದೆಯೆಂದು ತಿಳಿಯಿತೆ?

ನೋರಾ:—(ತಾತ್ಸಾರದಿಂದ-ನಿಧಾನವಾಗಿ) ಹೌ........ದು!

ಹೆಲ್ಮರ್:—ನಾನು ನಂಬುವುದಕ್ಕೆ ಆಗುವುದಿಲ್ಲ! ಅದು ಸರಿ. ಇನ್ನು ಈ ವಿಷಯವನ್ನು ಒಂದು ವ್ಯವಸ್ಥೆಗೆ ತರಬೇಕು. ಆ ಶಾಲನ್ನು ತೆಗೆ,-ತೆಗೆ. ಅಂದರೆ,-ತೆಗೆದುಬಿಡಬೇಕು. ಅವನನ್ನು ಯಾವು ದಾದರೂ ಒಂದು ರೀತಿಯಲ್ಲಿ ಸಮಾಧಾನ ಪಡಿಸಬೇಕು. ಏನು ಬಂದರೂ ಬರಲಿ. ಗುಟ್ಟು ಹೋಗಕೂಡದು. ಇನ್ನು ನಮ್ಮಿಬ್ಬರ ವಿಷಯ; ಹೊರಗೆ ಮಾತ್ರ ನಾವು ಎಂದಿನಂತೇ ನಡೆದುಕೊಂಡು ಇರಬೇಕು. ಹೊರಗಿನವರ ಎದುರಿಗೆಮಾತ್ರ- ತಿಳಿಯಿತೋ? ನನ್ನ ಮನೆಯಲ್ಲಿಯೇ ನೀನು ವಾಸಮಾಡಿ ಕೊಂಡಿರುತ್ತೀಯೆ—ಅದನ್ನೇನೂ ಹೇಳಬೇಕಾಗಿಲ್ಲ. ಆದರೆ ಮಕ್ಕಳ ಗೋಜಿಗೆ ನೀನು ಬರಕೂಡದು; ಅವರನ್ನು ಸಾಕಿ ಮುಂದೆ ತರುವುದು ನನ್ನ ಕೆಲಸ; ಆ ವಿಷಯದಲ್ಲಿ ನಿನ್ನನ್ನು ನಂಬುವುದಕ್ಕಾಗುವುದಿಲ್ಲ. ನಾನು ಪ್ರೀತಿಸಿ ಮುದ್ದಿಸಿ ಆಟ ವಾಡಿಸಿದ—ಇನ್ನೂ ಪ್ರೀತಿಯನ್ನಿಟ್ಟುಕೊಂಡಿರುವ ನನ್ನ ಮುದ್ದುಗಿಳಿಗೆ ಹೀಗೆಲ್ಲಾ ಹೇಳಬೇಕಾಗಿ ಬಂತಲ್ಲ-ನಾನೆಂತಹ ಹತಭಾಗ್ಯನು!—ಸರಿ ಸರಿ ಇದೇನು ಹುಚ್ಚುಮಾತು! ಅವೆಲ್ಲಾ ಮುಗಿದುವು. ಇನ್ನು ಮುಂದಕ್ಕೆ ಸುಖದ ಯೋಚನೆ ಏನೇನೂ ಇಲ್ಲ; ಬೆಂದ ಮನೆಗೆ ಹಿರಿದಿದ್ದೇ ಲಾಭವೆನ್ನುವ

ಹಾಗೆ—ನಮಗುಳಿದಿರುವುದು ಕೆಲವು ಚೂರುಪಾರುಗಳು— ಶ್ರೀಮದ್ಗಾಂಭೀರ್ಯವೊಂದು !—(ಬಾಗಿಲಲ್ಲಿ ಗಂಟೆ ಶಬ್ದ ಕೇಳುವುದು)

ಹೆಲ್ಮರ್:—(ಬೆಚ್ಚಿ) ಅದೇನದು? ಅರ್ಧರಾತ್ರಿಯಲ್ಲಿ! ಆಗಬೇಕಾದ್ದೆಲ್ಲಾ—! ಅವನೇ ಏನಾದರೂ-? ಬಚ್ಚಿಟ್ಟುಕೊ ನೋರಾ- ತಲೆ ನೋಯುತ್ತದೆ ಎಂದು ಹೇಳಿ ಮಲಗಿಕೊ. (ನೋರಾ ಸುಮ್ಮನೆನಿಂತು ಕೊಂಡಿರುವಳು. ಹೆಲ್ಮರ್ ಬಾಗಿಲಬಳಿ ಹೋಗಿ ಬೀಗವನ್ನು ತೆಗೆಯುವನು)

ಸೇವಕಳು:—(ಅರ್ಧ ಬಟ್ಟೆಯನ್ನುಟ್ಟು) ಅಮ್ಮಾವರಿಗೆ ಒಂದು ಕಾಗದ.

ಹೆಲ್ಮರ್:—ನನ್ನ ಕೈಲಿ ಕೊಡು. (ಕಾಗದವನ್ನು ತೆಗೆದುಕೊಂಡು ಬಾಗಿಲು ಹಾಕಿ ಕೊಳ್ಳುವನು) ಹೌದು, ಕಾಗದ ಅವನದೇ. ನಿನಗೆ ಕೊಡುವುದಿಲ್ಲ. ನಾನೇ ಓದುತ್ತೇನೆ.

ನೋರಾ:—ಹಾಗೆ ಆಗಲಿ, ಓದು.

ಹೆಲ್ಮರ್:—(ದೀಪದ ಬಳಿ ನಿಂತು) ಓದಲು ನನಗೆ ಧೈರ್ಯವೇ ಬರದು! ಅದರಲ್ಲಿ ನಮ್ಮಿಬ್ಬರ ಪರಸ್ಪರ ನಾಶ ಸೂಚನೆಯಿರ ಬಹುದು. ಯಾಕೆ ಹೆದರಿಕೆ? ಎಲ್ಲವೂ ಗೊತ್ತಾಗಿ ಬಿಡಲಿ. (ಕಾಗದವವನ್ನು ಒಡೆದು ಕೆಲವು ಪಂಕ್ತಿಗಳನ್ನು ಓದಿನೋಡಿ ಸಂತೋಷಯುಕ್ತನಾಗಿ ಕೂಗುವನು. ಅವನ ಕಡೆ ಪ್ರಶ್ನೋನ್ಮುಖಳಾಗುವಳು) ನೋರಾ—ಇಲ್ಲ, ಇಲ್ಲ, ನಾನಿನ್ನೊಂದು ಬಾರಿ ಓದಿ ನೋಡಿಕೊಡಬೇಕು-ಹೌದು ನಿಜ ನಿಜ! ನಾನು ಬದುಕಿ ಕೊಂಡೆ! ನೋರಾ ನಾನು ಬದುಕಿಕೊಂಡೆ.

ನೋರಾ:—ನಾನು ?

ಹೆಲ್ಮರ್:—ನೀನೂ ಕೂಡ—ಹೇಳಬೇಕೆ? ನಾವಿಬ್ಬರೂ ಬದುಕಿ ಕೊಂಡೆವು—ನೀನು ನಾನು ಇಬ್ಬರೂ!-ನೋಡು ಪತ್ರವನ್ನು ವಾಪಸ್ಸು ಕಳುಹಿಸಿದ್ದಾನೆ. ಹಿಂದಾದ್ದಕ್ಕೆ ಮರುಕ ಮತ್ತು ಪಶ್ಚಾತ್ತಾಪ ಪಡುತ್ತೇನೆಂದೂ—ತನಗೆ ದೊಡ್ಡ ಸೌಖ್ಯ

ಲಭಿಸಿರುವುದೆಂದೂ–ತನ್ನ ಜೀವನವೇ ಮಾರ್ಪಟ್ಟಿತೆಂದೂ.... ಅವನು ಹೇಳುವುದೆಲ್ಲಾ ಕಟ್ಟಿಕೊಂಡು ನಮಗೇನು! ನಾವು ಬದುಕಿಕೊಂಡೆವು ನೋರಾ. ಈಗ ಯಾರೂ ನಿನಗೇನೂ ಮಾಡಲಾರರು ನೋರಾ—ತಾಳು; ಈ ಹಾಳು ಕಾಗದವನ್ನು ಸುಟ್ಟುಬಿಡಬೇಕು. ನೋಡೋಣ. ಇನ್ನೊಂದಾವರ್ತಿ—(ಪತ್ರವನ್ನು ಮತ್ತೊಮ್ಮೆ ನೋಡುವನು) ಇಲ್ಲ. ಇಲ್ಲ. ನಾನು ನೋಡುವುದಿಲ್ಲ! ಇದೆಲ್ಲಾ ಒಂದು ಕೆಟ್ಟ ಸ್ವಪ್ನದಂತೆ ಆಗಿ ಬಿಡಬೇಕು. [ಪತ್ರ ಮತ್ತು ಕಾಗದವನ್ನು ಚೂರುಚೂರುಮಾಡಿ ಒಲೆಯ ಒಳಗೆಹಾಕುವನು. ಅವುಗಳು ಉರಿಯುವುದನ್ನು ನೋಡುವನು] ಆಗೋ-ಇನ್ನು ಪತ್ರದ ಹೆಸರೇ ಇಲ್ಲದಂತಾಯಿತು. ಅವನು ಬರೆದಿದ್ದ... ಕ್ರಿಸ್‌ಮಸ್ ಸಾಯಂಕಾಲದಿಂದ ನೀನು. —ನೋರಾ! ಕಳೆದ ಮೂರು ದಿನಗಳೂ ನಿನಗೆ ಬಹಳ ಭಯಂಕರವಾಗಿರಬೇಕು.

ನೋರಾ:—ಈ ಮೂರು ದಿನಗಳೂ ಬಹಳ ಹೋರಾಡಿದ್ದೇನೆ. ನನ್ನಲ್ಲೇ!

ಹೆಲ್ಮರ್:—ಮನಸ್ಸಿನಲ್ಲೇ ತುಂಬಾ ಯಾತನೆಪಟ್ಟಿರಬೇಕು. ಎಲ್ಲಿ ನೋಡಿದರೂ ದಾರಿಕಾಣದೆ! ಕಳೆದ ಗಂಡಾಂತರಗಳನ್ನು ನೆನಪಿಗೆ ತಂದು ಉಪಯೋಗವೇನು! ಸಂತೋಷದಿಂದ "ಗಂಡ ಕಳೆಯಿತು–ಪೀಡೆತಪ್ಪಿತು" ಎಂದು ಗಟ್ಟಿಯಾಗಿ ಕೂಗೋಣ ನೋರಾ, ನನ್ನ ಮಾತು ಕೇಳು. ಎಲ್ಲಾ ಅಪಾಯವೂ ತೀರಿತೆಂದು ಇನ್ನೂ ಮನಸ್ಸಿಗೆ ಹತ್ತಿದಂತೆ ಕಾಣುವುದಿಲ್ಲ! ಇದೇನಿದು! ನಿನ್ನ ತಾತ್ಸಾರ ಮುಖ! ನನ್ನ ಪುಟ್ಟ ಹುಡುಗಿ ನೋರಾ, ನನಗೆಲ್ಲಾ ಅರ್ಥವಾಯಿತು. ನಾನು ಕ್ಷಮಿಸಿಲ್ಲವೆಂದು ಅನುಮಾನವಿರಬಹುದು. ನಿಜವಾಗಿಯೂ ಕ್ಷಮಿಸಿದ್ದೇನೆ. ದೇವರಾಣೆಗೂ! ಎಲ್ಲವನ್ನೂ ಕ್ಷಮಿಸಿದ್ದೇನೆ. ನೀನು ಮಾಡಿದ್ದು ನನಗೆ ಅರ್ಥವಾಯಿತು. ನನ್ನ ಮೇಲಿನ ಪ್ರೀತಿಗೋಸ್ಕರ ಮಾಡಿದೆ.

ನೋರಾ:—ಅದು ನಿಜ.

ಹೆಲ್ಮರ್:—ಹೆಂಡತಿ ಗಂಡನನ್ನು ಯಾವರೀತಿ ಪ್ರೀತಿಸಬೇಕೋ ಹಾಗೆಯೇ ನಡೆದಿದ್ದೀಯೆ. ಆದರೆ ಲೋಕ ವ್ಯವಹಾರಜ್ಞಾನ ಸ್ವಲ್ಪ ಕಡಿಮೆಯಾಗಿತ್ತು. ನಿನ್ನ ಸ್ವಂತ ಜವಾಬ್ದಾರಿಯಲ್ಲಿ ನಡೆಯಲು ನಿನಗೆ ಸ್ವಲ್ಪ ಶಕ್ತಿ ಕಡಿಮೆಯಾದಾಕ್ಷಣ ನಿನ್ನ ಮೇಲಿನ ಪ್ರೀತಿಗೆ ಕುಂದಕವೆಂದು ಯೋಚಿಸುತ್ತೀಯಾ? ಇಲ್ಲ. ಹಾಗೆಂದಿಗೂ ಇಲ್ಲ; ನೀನು ಸುಮ್ಮನೆ ನನ್ನ ಅವಲಂಬನದಲ್ಲಿರು ಅಷ್ಟೆ. ಬುದ್ಧಿ ಹೇಳಿ ನಿನ್ನನ್ನು ಮುಂದಕ್ಕೆ ತರುವುದು ನನ್ನ ಕೆಲಸ! ಅಬಲೆಯಾಗಿ ಅಸಹಾಯಳೂ ಆಗಿರುವುದರಿಂದ ನಿನ್ನ ಮೇಲಿನ ಪ್ರೀತಿ ಇಮ್ಮಡಿಯಾಗಿರುವುದು. ನಾನು ಮುಳುಗಿಹೋದೆನೆಂಬ ಅಂಜಿಕೆಯಿಂದ ನಾನು ಮೊದಲು ಆಡಿದ ನಿಷ್ಠುರವಾದ ಮಾತುಗಳನ್ನು ಮರೆತುಬಿಡಬೇಕು. ನಾನು ನಿನ್ನನ್ನು ಸತ್ಯವಾಗಿಯೂ ಕ್ಷಮಿಸಿದ್ದೇನೆ. ದೇವರಾಣೆ ಮನ್ನಿಸಿದ್ದೇನೆ.

ನೋರಾ:—ನಿನ್ನ ಮನ್ನಣೆಯಿಂದ ಧನ್ಯಳಾದೆ. (ಬಲಗಡೆ ಬಾಗಿಲಿನಿಂದ ಹೋಗುವಳು)

ಹೆಲ್ಮರ್:—ಬೇಡ—ಹೋಗಬೇಡ—(ಒಳಗೆ ಇಣಕಿ ನೋಡುತ್ತಾನೆ) ಅಲ್ಲಿ ಏನು ಮಾಡುತ್ತಿದ್ದೀಯೆ?

ನೋರಾ:—(ಒಳಗಿನಿಂದ) ಈ ವೇಷದ ಉಡುಪನ್ನು ತೆಗೆಯುತ್ತಿದ್ದೇನೆ.

ಹೆಲ್ಮರ್:—(ಬಾಗಿಲ ಹತ್ತಿರ ನಿಂತುಕೊಂಡು) ಸರಿ-ಹಾಗೇ ಮಾಡು, ಬೆದರಿಹೋದ ನನ್ನ ಪುಟ್ಟ ಗಾನಪಕ್ಷಿ! ಮನಸ್ಸನ್ನು ಸಮಾಧಾನ ಮಾಡಿಕೊಂಡು ನಿಶ್ಚಿಂತೆಯಾಗಿರಬೇಕು. ಏನೂ ಯೋಚನೆ ಮಾಡಬೇಡ, ಧೈರ್ಯದಿಂದಿರು. ನನ್ನ ದೊಡ್ಡ ರೆಕ್ಕೆಗಳೊಳಗೆ ನನ್ನ ಪುಟ್ಟ ಪಕ್ಷಿಯನ್ನು ಸಂರಕ್ಷಿಸಿ ಕೊಂಡಿರುತ್ತೇನೆ. (ಬಾಗಿಲಮುಂದೆ ಶಥಪಥ ಸುತ್ತುವನು) ನಮ್ಮ ಮನೆಯೊಳಗೆ ಎಷ್ಟು ಶಾಖವಾಗಿಯೂ ನೆಮ್ಮದಿಯಾಗಿಯೂ ಇದೆ ನೋರಾ!

ಇದು ನಿನ್ನ ಗೂಡು. ಗಿಡಗನು ಅಟ್ಟಿಸಿಕೊಂಡು ಬಂದ ನನ್ನ ಪಾರಿವಾಳವನ್ನು ಇಲ್ಲಿ ರಕ್ಷಣೆ ಮಾಡಿಟ್ಟುಕೊಂಡಿರುತ್ತೇನೆ. ಕಳವಳಪಡುವ ನಿನ್ನ ಹೃದಯವನ್ನು ಸಂತೈಸುತ್ತೇನೆ. ಮನಸ್ಸು ಕೊಂಚಕೊಂಚವಾಗಿ ಸಮಾಧಾನಕ್ಕೆ ಬರುತ್ತೆ, ಹೆದರಬೇಡ ನೋರಾ! ನಾಳೆ ಬೆಳಗ್ಗೆ ಎಲ್ಲವೂ ಬೇರೆಯಾಗಿ ಕಾಣುತ್ತೆ. ಇನ್ನು ಸ್ವಲ್ಪ ಕಾಲದಲ್ಲೇ ಎಲ್ಲವೂ ಪೂರ್ವದಂತೆಯೇ ಇರುತ್ತವೆ. ಶೀಘ್ರದಲ್ಲಿಯೇ ನಾನು ನಿನ್ನನ್ನು ಕ್ಷಮಿಸಿರುವುದು ನಿನ್ನ ಮನಸ್ಸಿಗೆ ಚೆನ್ನಾಗಿ ಗೊತ್ತಾಗುತ್ತೆ; ನಾನು ಬಾಯಿಬಿಟ್ಟು ಹೇಳಬೇಕಾದ ಅವಶ್ಯಕವೇ ಇರಲಿಲ್ಲ. ನಾನು ನಿನ್ನನ್ನು ನಿಂದಿಸಿ ನಿನ್ನ ಕೈ ಬಿಡುವವನೆಂದು ಎಂದಿಗೂ ಯೋಚಿಸಬೇಡ. ಸತ್ಯವಂತನಾದ ನನ್ನಂತಹ ಮನುಷ್ಯನ ಸ್ವಭಾವ ನಿನಗೆ ಚೆನ್ನಾಗಿ ಗೊತ್ತಿಲ್ಲ. ಹೆಂಡತಿಯ ತಪ್ಪನ್ನೆಲ್ಲಾ ಕ್ಷಮಿಸಿರುವೆನು, ಮನಃಪೂರ್ವಕವಾಗಿ ಯಾವ ಅಡಚಣೆಯೂ ಇಲ್ಲದೆ—ಎಂಬ ಭಾವನೆ ಗಂಡನಿಗೆ ವರ್ಣಿಸಲಾರದಷ್ಟು ಆನಂದವನ್ನು ಉಂಟುಮಾಡುತ್ತೆ—ನೋರಾ! ಆಗ ಹೆಂಡತಿ ಗಂಡನಿಗೆ, ಇಮ್ಮಡಿಯಾಗಿ ತನ್ನವಳೇ ಆಗುವಳು. ಅವಳಿಗೆ ಅವನು ಬೇರೊಂದು ಜೀವನವನ್ನು ಕೊಟ್ಟಂತಾಗುವುದು. ಅವಳು ಅವನಿಗೆ ಹೆಂಡತಿ ಮತ್ತು ಮಗು ಎರಡೂ ಒಟ್ಟಿಗೆ ಆದಂತಾಗುವುದು. ಹಾಗೆ ಇರು ಇನ್ನುಮೇಲೆ, ಹೆದರಿದ, ನಿಸ್ಸಹಾಯಕಳಾದ ನನ್ನ ಪುಟ್ಟ ಹುಡುಗಿ! ಏನೂ ಯೋಚನೆ ಮಾಡಬೇಡ ನೋರಾ, ನನ್ನಲ್ಲಿ ಮಾತ್ರ ಯಾವುದನ್ನೂ ಮರೆಮಾಚಬೇಡ, ನಾನೇ ನಿನ್ನ ಮನಸ್ಸು; ನಾನೇ ನಿನ್ನ ಮನಸ್ಸಾಕ್ಷಿ; ನಾನೇ ನಿನ್ನ ಸರ್ವಸ್ವ——. ಇದೇನಿದು? ಮಲಗಿಕೊಳ್ಳಲಿಲ್ಲವೆ? ಬೇರೆ ಬಟ್ಟೆ ಹಾಕಿಕೊಂಡಿದ್ದೀಯಲ್ಲ!

ನೋರಾ:—(ದಿನಗಟ್ಲೆ ಬಟ್ಟೆಯುಟ್ಟು) ಹೌದು ತೊರ್ವಾಲ್ಡ್; ಬೇರೆ ಬಟ್ಟೆ.

ಹೆಲ್ಮರ್:—ಯಾತಕ್ಕೋಸ್ಕರ ಬದಲಾಯಿಸಿದೆ? ರಾತ್ರಿ ಇಷ್ಟು ಹೊತ್ತಿನಲ್ಲಿ?

ನೋರಾ:—ನಾನು ರಾತ್ರಿ ಇಲ್ಲಿ ಮಲಗುವುದಿಲ್ಲ.

ಹೆಲ್ಮರ್:—ಇದೇನು ಮಾತು ನೋರಾ?—

ನೋರಾ:—(ಗಡಿಯಾರವನ್ನು ನೋಡುತ್ತಾ) ಅಷ್ಟೇನೂ ಹೊತ್ತಾಗಿಲ್ಲ. ಅಲ್ಲಿ ಕೂತುಕೋ, ತೊರ್ವಾಲ್ಡ್. ನಾವಿಬ್ಬರೂ ಮಾತನಾಡುವುದು ಬಹಳ ಇದೆ. (ಮೇಜಿನ ಒಂದುಕಡೆ ತಾನು ಕುಳಿತುಕೊಳ್ಳುವಳು)

ಹೆಲ್ಮರ್:—ನೋರಾ ಇದೇನಿದು? ಯಾಕೆ ಇಷ್ಟು ನಿಷ್ಠುರವಾದ ನೋಟ

ನೋರಾ:—ಸುಮ್ಮನೆ ಕೂತುಕೋ. ಈ ವಿಷಯ ಸ್ವಲ್ಪಹೊತ್ತು ಹಿಡಿಯುತ್ತೆ. ಬಹಳ ವಿಷಯಗಳಿವೆ.

ಹೆಲ್ಮರ್:—(ಅವಳ ಎದುರುಗಡೆ ಕುಳಿತುಕೊಳ್ಳುವನು) ಯಾಕೋ ಹೆದರಿಕೆಯಾಗುತ್ತೆ ನೋರಾ!—ನನಗೇನೂ ಅರ್ಥವಾಗಲಿಲ್ಲ

ನೋರಾ:—ಹೌದು, ಹಾಗೇ ಅದು. ನಾನು ನಿನಗೆ ಅರ್ಥವಾಗುವುದಿಲ್ಲ; ನೀನು ನನಗೆ ಇಂದಿನವರೆಗೆ ಅರ್ಥವಾಗಿರಲಿಲ್ಲ. ಸುಮ್ಮನಿರು; ಮಾತಿನ ಮಧ್ಯದಲ್ಲಿ ಅಡಚಣೆ ಮಾಡಬೇಡ, ನನ್ನ ಮಾತುಗಳನ್ನೆಲ್ಲಾ ಮುಂದಟ್ಟು ಮಾಡಿಕೊಂಡು ಸಾವಧಾನದಿಂದ ಕೇಳು—ತೊರ್ವಾಲ್ಡ್-ಇದು ನಮ್ಮಿಬ್ಬರ ಲೆಕ್ಕಾಚಾರದ ವ್ಯವಸ್ಥೆಯ ಕಾಲ.

ಹೆಲ್ಮರ್:—ಹಾಗೆನ್ನುವುದರ ಅರ್ಥವೇನು?

ನೋರಾ:—(ಸ್ವಲ್ಪಕಾಲ ಸುಮ್ಮನಿದ್ದು) ನಾವಿಬ್ಬರೂ ಹೀಗೆ ಕುಳಿತುಕೊಂಡಿರುವುದರಲ್ಲಿ ಏನೋ ಒಂದು ವಿಶೇಷವು ನಿನಗೆ ಕಾಣುವುದಿಲ್ಲವೆ?

ಹೆಲ್ಮರ್:—ಅದೇನದು?

ನೋರಾ:—ನಮ್ಮಿಬ್ಬರಿಗೂ ಮದುವೆಯಾಗಿ ಎಂಟು ವರ್ಷಗಳಾದುವು. ಈ ಕಾಲದಲ್ಲಿ ನಾವಿಬ್ಬರೂ—ಗಂಡಹೆಂಡಂದಿರು—ಖಂಡಿತವಾಗಿ ಮಾತನಾಡುವುದಕ್ಕೆ ಗಂಭೀರವಾಗಿ ಕುಳಿತದ್ದು ಇದೇ ಮೊದಲಲ್ಲವೆ ?

ಹೆಲ್ಮರ್:—ಖಂಡಿತ—ಗಂಭೀರ ಇವುಗಳಿಗೇನು ಅರ್ಥ ?

ನೋರಾ:—ಕಳೆದ ಎಂಟುವರ್ಷಗಳಲ್ಲಿ—ಇನ್ನೂ ಹೆಚ್ಚು, ನಾವಿಬ್ಬರೂ ಗುರುತುಮಾಡಿಕೊಂಡ ದಿನದಿಂದ-ಒಂದು ದೊಡ್ಡ ವಿಷಯದಲ್ಲೂ ಒಂದು ಮಾತನ್ನೂ ಆಡಿಲ್ಲ.

ಹೆಲ್ಮರ್:—ನನ್ನನ್ನು ಏನೆಂದು ತಿಳಿದುಕೊಂಡಿದ್ದೀಯೆ ? ನಿನ್ನ ಸಹಾಯದಿಂದೇನೂ ಆಗದ್ದ ನನ್ನ ಚಿಂತೆಯನ್ನೆಲ್ಲಾ ನಿನಗೆ ಹೇಳಿ ವ್ಯಥೆಯನ್ನುಂಟುಮಾಡುವವನೆಂದು ತಿಳಿದಿದ್ದೀಯಾ ?

ನೋರಾ:—ಮನೆಯ ಹೊರಗಿನ ನಿನ್ನ ಉದ್ಯೋಗ—ನಿನ್ನ ಕೆಲಸ ಕಾರ್ಯಗಳು ಇವುಗಳ ವಿಷಯ ಮಾತಾಡುತ್ತಿಲ್ಲ. ನಾನು ಹೇಳುವುದೇನೆಂದರೆ ಮನಃಪೂರ್ವಕವಾಗಿ-ಸಂಪೂರ್ಣವಾದ ಆಸಕ್ತಿಯೊಡನೆ—ಯಾವ ದೊಡ್ಡ ವಿಷಯವನ್ನೂ ಚರ್ಚಿಸಿ ಅದರ ಆಳವನ್ನು ಕಂಡು ಹಿಡಿಯಲು ಇಬ್ಬರೂ ಜೊತೆಯಲ್ಲಿ ಪ್ರವರ್ತಿಸಲಿಲ್ಲ.

ಹೆಲ್ಮರ್:—ಹಾಗೆ ಮಾಡಿದ್ದ ಪಕ್ಷದಲ್ಲಿ ಅದರಿಂದ ನಿನಗೇನು ಉಪಯೋಗವಾಗುತ್ತಿತ್ತು ?

ನೋರಾ:—ನಾನು ಹೇಳುವುದೂ ಅದೆ ! ನನ್ನ ಸ್ವಭಾವ ನಿನಗೆ ಸ್ವಲ್ಪವೂ ತಿಳಿಯದು—ನನಗೆ ತುಂಬಾ ಅನ್ಯಾಯವಾಗಿದೆ ತೊರ್ವಾಲ್ಡ್-ಮೊದಲು ಅಪ್ಪನಿಂದ ಅನಂತರ ನಿನ್ನಿಂದ.

ಹೆಲ್ಮರ್:—ಏನು ? ಅನ್ಯಾಯವೆ ? ನಮ್ಮಿಬ್ಬರಿಂದ ? ಪ್ರಪಂಚಕ್ಕಿಂತಲೂ ಹೆಚ್ಚಾಗಿ ನಿನ್ನ ಮೇಲೆ ಪ್ರೀತಿ ಇಟ್ಟಿದ್ದ ನಮ್ಮಿಬ್ಬರಿಂದಲೆ ?

ನೋರಾ:—(ತಲೆಯನ್ನಾಡಿಸುತ್ತಾ) ನನ್ನಲ್ಲಿ ನಿಜವಾಗಿಯೂ ಯಾವಾಗಲೂ ನೀನು ಪ್ರೀತಿಯಿಟ್ಟಿರಲಿಲ್ಲ. ನನ್ನಿಂದ ಪ್ರೀತಿಯ ಸಂತೋಷವನ್ನು ಪಡೆದುಕೊಳ್ಳುವುದರಲ್ಲಿ ಆಸಕ್ತಿ ಇಟ್ಟಿದ್ದೆ ಅಷ್ಟೆ.

ಹೆಲ್ಮರ್:—ನೀನು ಏನು ಹೇಳುತ್ತಿದ್ದೀಯೆ ?

ನೋರಾ:—ನಾನು ಹೇಳುವುದೆಲ್ಲಾ ನಿಜ ತೊರ್ವಾಲ್ಡ್. ನಾನು ನಮ್ಮಪ್ಪನ ಮನೆಯಲ್ಲಿರುವಾಗ್ಗೆ ಅವನು ಪ್ರತಿಯೊಂದು ಪ್ರಾಪಂಚಿಕ ವಿಷಯದಲ್ಲೂ ತನ್ನ ಅಭಿಪ್ರಾಯಗಳನ್ನು ನನಗೆ ಹೇಳಿ ಪಾಠಮಾಡಿಸುತ್ತಿದ್ದನು. ನಾನೂ ಆ ಅಭಿಪ್ರಾಯಗಳನ್ನೇ ಅಂಗೀಕರಿಸುತ್ತಿದ್ದೆ. ಒಂದು ವೇಳೆ ಬೇರೆ ಅಭಿಪ್ರಾಯವಿದ್ದರೂ ಅದನ್ನು ಮುಚ್ಚುಬಿಡುತ್ತಿದ್ದೆ; ಯಾಕಂದರೆ ಅದು ಅವನಿಗೆ ಒಪ್ಪುತ್ತಿರಲಿಲ್ಲ. ಮತ್ತು ಸಹಿಸುತ್ತಿರಲಿಲ್ಲ. ನನ್ನನ್ನು ತನ್ನ ಬೊಂಬೆಯೆಂದು ಕರೆಯುತ್ತಿದ್ದನು. ನಾನು ನನ್ನ ಬೊಂಬೆಗಳೊಂದಿಗೆ ಆಟವಾಡಿದ ಹಾಗೆ ನನ್ನೊಡನೆ ಅವನು ಆಟವಾಡುತ್ತಿದ್ದನು. ಅನಂತರ ನಿನ್ನೊಂದಿಗೆ ವಾಸಮಾಡಲು ಬಂದಾಗ್ಗೆ—

ಹೆಲ್ಮರ್:—ನಮ್ಮ ವಿವಾಹದ ವರ್ಣನೆ ಬಹಳ ಚೆನ್ನಾಗಿದೆ.

ನೋರಾ:—(ಶಾಂತವಾಗಿ) ನನ್ನ ಅರ್ಥವೇನಂದರೆ, ನಮ್ಮಪ್ಪನ ಕೈಕೆಳಗಿನಿಂದ ನಿನ್ನ ಕೈಕೆಳಗೆ ಬಂದೆನೆಂದು—ಅಷ್ಟೆ. ಆಮೇಲೆ ನಿನ್ನ ಇಷ್ಟಪ್ರಕಾರ ಪ್ರತಿಯೊಂದನ್ನೂ ಏರ್ಪಡಿಸಿದೆ. ಆಮೇಲೆ ನಿನ್ನ ಇಚ್ಛೆಯೇ ನನ್ನ ಇಚ್ಛೆ ಅಲ್ಲವಾದರೂ ನಟಿಸಬೇಕಾಗಿ ಬಂತು. ನಿಜವಾಗಿ ಹಾಗೆ ನಂಬಿದೆನೋ ಅಥವಾ ನಟಿಸಿದೆನೋ ಈಗ ಹೇಳಲಾರೆ. ಜ್ಞಾಪಿಸಿಕೊಂಡರೆ ಒಂದು ಬಾರಿ ನಿಜ, ಮತ್ತೊಂದು ಬಾರಿ ನಟನೆ ಎಂದು ಕಾಣುತ್ತೆ. ಆ ಕಾಲವನ್ನೆಲ್ಲಾ ಮನಸ್ಸಿಗೆ ತಂದುಕೊಂಡರೆ ನಾನು ಒಬ್ಬ ಬಡಪಾಯಿ ಹೆಂಗಸಿನಂತೆ ಅಹನ್ಯಹನಿಕಾಲ

ಕ್ಷೇಪ ಮಾಡುತ್ತಿದ್ದೆ. ತೊರ್ವಾಲ್ಡ್ ನಿನ್ನ ಮುಂದೆ ನಿನ್ನ ಇಚ್ಛೆಯಂತೆ ನಿನ್ನ ಆನಂದಕ್ಕೋಸ್ಕರವಾಗಿ ಆಡುವುದೊಂದೇ ನನ್ನ ಕೆಲಸವಾಗಿತ್ತು. ನಿನಗೆ ಅದೇ ಬೇಕಾಗಿತ್ತು. ನಮ್ಮಪ್ಪ ಮತ್ತು ನೀನು ನನ್ನ ವಿಷಯದಲ್ಲಿ ಬಹಳ ಪಾಪಕೃತ್ಯವನ್ನು ನಡೆಸಿದ್ದೀರಿ. ನನ್ನ ಜನ್ಮವು ನಿರರ್ಥಕವಾದ್ದು ನಿನ್ನಿಂದಲೇ.

ಹೆಲ್ಮರ್:—ನೋರಾ, ನೀನು ಎಷ್ಟು ಕೃತಘ್ನಳು. ಮತ್ತು ಏನು ಅವಿವೇಕದ ಮಾತುಗಳನ್ನಾಡುತ್ತಿದೀಯೆ! ಇಲ್ಲಿ ನೀನು ಸುಖವಾಗಿರಲಿಲ್ಲವೆ ?

ನೋರಾ:—ಇಲ್ಲ, ನಾನು ಇಲ್ಲಿ ಯಾವಾಗಲೂ ಸುಖವಾಗಿರಲಿಲ್ಲ. ಸುಖವಾಗಿದ್ದಿರಬಹುದೆಂದಿದ್ದೆ. ಆದರೆ ನಿಜವಾಗಿಯೂ ಸುಖವಾಗಿರಲಿಲ್ಲ.

ಹೆಲ್ಮರ್:—ಇಲ್ಲ ? ಸುಖವಾಗಿರಲಿಲ್ಲ ! ನಿಜವೆ ?

ನೋರಾ:—ಇಲ್ಲ ಸುಖವಾಗಿರಲಿಲ್ಲ. ಇಲ್ಲಿ ಇರುವುದು ಮನಸ್ಸಿಗೆ ಹರ್ಷವಾಗಿಯೂ ವಿನೋದವಾಗಿಯೂ ಇತ್ತು. ಅಷ್ಟೆ—ನನ್ನಲ್ಲಿ ಯಾವಾಗಲೂ ನೀನು ದಯೆಯನ್ನು ತೋರಿಸುತ್ತಿದ್ದೆ. ಆದರೆ ಈ ಮನೆ ನನಗೆ ಒಂದು ಆಟದ ಮನೆಯಾಗಿತ್ತೇ ವಿನಹಾ ಮತ್ತೇನೂ ಇಲ್ಲ. ನಾನು ನಿನ್ನ ಬೊಂಬೆ ಹೆಂಡತಿ-ನನ್ನ ಅಪ್ಪನಿಗೆ ಬೊಂಬೆ ಮಗುವಾಗಿದ್ದ ಹಾಗೆ; ನನ್ನ ಬೊಂಬೆಗಳು ಈಗ ನನ್ನ ಮುದ್ದು ಮಕ್ಕಳು ! ನೀನು ನನ್ನ ಜೊತೆಯಲ್ಲಿ ಆಟವಾಡುತ್ತಿದ್ದಾಗ್ಗೆ ಬಹಳ ದೊಡ್ಡ ತಮಾಷೆ ಎಂದೆಣಿಸಿದ್ದೆ ! ನಾನು ನನ್ನ ಮಕ್ಕಳೊಂದಿಗೆ ಆಡಿದಾಗ್ಗೆ ಅವೂ ಹಾಗೆಯೇ ತಿಳಿದುಕೊಳ್ಳುವುವು ! ತೊರ್ವಾಲ್ಡ್, ನಮ್ಮ ಮದುವೆಯ,—ನಮ್ಮ ಸಂಸಾರದ ಗುಟ್ಟು ಅದೇ.

ಹೆಲ್ಮರ್:—ನಿನ್ನ ವಕ್ರಬುದ್ಧಿ ನಿನ್ನ ಅತಿಶಯೋಕ್ತಿಗಳಿದ್ದರೂ ನೀನು ಹೇಳುವುದರಲ್ಲಿ ನಿಜಾಂಶವು ಸ್ವಲ್ಪ ಇದೆಯೆಂದು ತೋರುತ್ತೆ. ಆದರೆ ಮುಂದೆ ಎಲ್ಲವನ್ನೂ ಬದಲಾಯಿಸೋಣ. ಆಟದಕಾಲ ಮುಗಿಯಿತು ; ಇನ್ನು ಮೇಲೆ ಪಾಠದ ಕಾಲ.

ನೋರಾ:—ಯಾರ ಪಾಠ ? ನನ್ನದೋ ಅಥವಾ ಮಕ್ಕಳದೋ ?

ಹೆಲ್ಮರ್:—ಇಬ್ಬರದೂ—ನಿನ್ನದೂ ಮತ್ತು ಮಕ್ಕಳದೂ ನೋರಾ.

ನೋರಾ:—ಅಯ್ಯೋ ತೊರ್ವಾಲ್ಡ್! ನನ್ನನ್ನು ಯೋಗ್ಯಳಾದ ಹೆಂಡತಿಯನ್ನಾಗಿ ತರಪೇತು ಮಾಡತಕ್ಕವನು ನೀನಲ್ಲ ತೊರ್ವಾಲ್ಡ್.

ಹೆಲ್ಮರ್?—ಹಾಗೆ ಹೇಳಲು ನಿನಗೆ ಬಾಯಿ ಬಂತೆ ?

ನೋರಾ:—ಅನಂತರ ನಾನು !—ಮಕ್ಕಳನ್ನು ತರಪೇತು ಮಾಡಲು ನನಗೆ ಹೇಗೆ ಯೋಗ್ಯತೆಯಿದೆ ?

ಹೆಲ್ಮರ್:—ನೋರಾ—!

ನೋರಾ :—ಸ್ವಲ್ಪ ಹೊತ್ತಿಗೆ ಮುಂಚೆ ನೀನೇ ಹೇಳಲಿಲ್ಲವೆ ? ಮಕ್ಕಳನ್ನು ಸಾಕಿ ಮುಂದೆ ತರುವ ವಿಷಯದಲ್ಲಿ ನನ್ನನ್ನು ನಂಬಲಾರೆ ಯೆಂದು !

ಹೆಲ್ಮರ್:—ಕೋಪದಲ್ಲಾಡಿದ ಮಾತು ಅದು ! ಅದಕ್ಕೆ ಯಾತಕ್ಕೆ ಅಷ್ಟು ಬೆಲೆ ?

ನೋರಾ:—ಅಲ್ಲವೆ ಮತ್ತೆ? **ಈಗ** ನೀನು ಹೇಳಿದ್ದು ಸರಿ. ಆ ಕೆಲಸವನ್ನು ಕೈಕೊಳ್ಳಲು ನನಗೆ ಯೋಗ್ಯತೆಯಿಲ್ಲ. ಅದಕ್ಕೆ ಮುಂಚೆ ಬೇರೆ ಇನ್ನೊಂದು ಕೆಲಸವಾಗಬೇಕಾಗಿದೆ. ನನ್ನ ಸಂಸ್ಕಾರವನ್ನು ನಾನು ಮೊದಲು ಪಡೆಯಬೇಕು. ಅದಕ್ಕೆ ನೀನು ಗುರುವಲ್ಲ. ಅದು ಸ್ವಂತ ಪ್ರಯತ್ನದಿಂದಲೇ ಆಗಬೇಕು. ಆದ್ದರಿಂದಲೇ ನಾನು ಎಲ್ಲವನ್ನೂ ಬಿಟ್ಟು ಹೊರಟಿರುವುದು.

ಹೆಲ್ಮರ್:—(ಚಿಮ್ಮಿನೆದ್ದು) ಏನು ಹೇಳಿದೆ ?

ನೋರಾ:—ನನ್ನನ್ನು ನಾನು ತಿಳಿಯಬೇಕಾದರೆ—ನನ್ನ ಸುತ್ತಲಿರುವ ಪ್ರಕೃತಿಯನ್ನೆಲ್ಲಾ ತಿಳಿಯಬೇಕಾದರೆ—ಅಸಹಾಯಳಾಗಿ ಎಲ್ಲವನ್ನೂ ನಾನೇ ಪರೀಕ್ಷಿಸಿ ನೋಡಬೇಕು. ಅದಕ್ಕೋಸ್ಕರವಾಗಿಯೇ ಎಲ್ಲವನ್ನೂ ಬಿಟ್ಟು ಹೋಗಬೇಕೆಂದಿರುವುದು.

ಹೆಲ್ಮರ್:—ನೋರಾ—ನೋರಾ!

ನೋರಾ:—ಈ ಕ್ಷಣದಲ್ಲಿ ಇಲ್ಲಿ ಬಿಟ್ಟು ಹೊರಟು ಹೋಗುತ್ತೇನೆ. ಕ್ರಿಸ್ಟೀನ್ ಈ ರಾತ್ರಿ ನನಗೆ ಆಶ್ರಯವನ್ನು ಕೊಡಬಹುದು.

ಹೆಲ್ಮರ್—ನಿನಗೆ ಹುಚ್ಚು ಹಿಡಿದಿದೆ. ಅದಕ್ಕೆ ನಾನು ಒಪ್ಪುವುದಿಲ್ಲ! ಹಾಗೆ ಮಾಡಕೂಡದೆಂದು ಆಜ್ಞೆಮಾಡುತ್ತೇನೆ.

ನೋರಾ:—ಈಗ ನಿನ್ನ ಆಜ್ಞೆಗೆ ಬೆಲೆಯೇನೂ ಇಲ್ಲ. ನನಗೆ ಸೇರಿದ ವಸ್ತುಗಳನ್ನು ಮಾತ್ರ ತೆಗೆದುಕೊಂಡುಹೋಗುತ್ತೇನೆ. ಈಗ ಲಾಗಲಿ-ಮುಂದಾಗಲಿ. ನಿನಗೆ ಸೇರಿದ್ದೊಂದನ್ನೂ ಮುಟ್ಟು ವುದಿಲ್ಲ!

ಹೆಲ್ಮರ್:—ಇದು ಎಂಥಾ ಹುಚ್ಚು ಇದು?

ನೋರಾ:—ನಾಳೆ ನನ್ನ ಮನೆಗೆ ಹೋಗುತ್ತೇನೆ—ನನ್ನ ಮನೆ ಯೆಂದರೆ ನನ್ನ ಹಳೆಯ ಮನೆ! ಮಾಡುವುದಕ್ಕೆ ಕೆಲಸ ವೇನಾದರೂ ಅಲ್ಲಿ ಸಿಕ್ಕುವುದು.

ಹೆಲ್ಮರ್:—ಅಯ್ಯೋ—ಕುರುಡಿ—ಹುಚ್ಚಿ!

ನೋರಾ:—ತೊರ್ವಾಲ್ಡ್, ಎಲ್ಲಾದರೂ ಒಬ್ಬಂಟಿಗಳಾಗಿದ್ದು ನನ್ನ ವಿವೇಚನಾ ಬುದ್ಧಿಯನ್ನು ಸಂಪಾದಿಸಬೇಕಾಗಿದೆ.

ಹೆಲ್ಮರ್:—ಏನು? ಮನೆಯನ್ನು ತೊರೆದು—ಗಂಡನನ್ನು ಬಿಟ್ಟು—ಮಕ್ಕಳನ್ನು ಅಗಲಿ!—ಜನಗಳೇನನ್ನುವರು?

ನೋರಾ:—ಅದನ್ನೆಲ್ಲಾ ಈಗ ಯೋಚಿಸುವುದಕ್ಕಾಗುವುದಿಲ್ಲ, ಎಲ್ಲ ವನ್ನೂ ತ್ಯಾಗಮಾಡಬೇಕೆಂಬುದೇ ನನ್ನ ನಿಶ್ಚಯ!

ಹೆಲ್ಮರ್:—ಇದೇನಿದು? ಸಿಡಿಲು ಬಡಿದಹಾಗೆ ಮಾತನ್ನಾಡುತ್ತೀಯೆ. ನೀನು ಮೀಸಲಾಗಿ ಮಾಡಬೇಕಾದ ಕಾರ್ಯಗಳನ್ನೆಲ್ಲಾ ಬಿಟ್ಟು ಓಡಿಹೋಗುತ್ತೀಯಾ?

ನೋರಾ:—ನಾನು ಮೀಸಲಾಗಿ ಮಾಡಬೇಕಾದ ಕಾರ್ಯಗಳು ಯಾವವು?

ಹೆಲ್ಮರ್:—ಅವುಗಳನ್ನು ನಿನಗೆ ನಾನು ಹೇಳಬೇಕೆ? ನಿನ್ನ ಗಂಡ ಮತ್ತು ನಿನ್ನ ಮಕ್ಕಳುಗಳಿಗೆ ಸಂಬಂಧಪಟ್ಟವುಗಳಲ್ಲವೆ?

ನೋರಾ:—ಅವುಗಳಲ್ಲದೆ ಮೀಸಲಾದ ಬೇರೆ ಕಾರ್ಯಗಳಿವೆ.

ಹೆಲ್ಮರ್:—ಅಂಥವುಗಳು ಯಾವವೂ ಇಲ್ಲ! ಅವುಗಳೇನಿರಬಹುದು?

ನೋರಾ:—ಆತ್ಮಸಿದ್ಧಿ ಕಾರ್ಯಗಳು—ನನ್ನ ಜನ್ಮವನ್ನು ಸಾರ್ಥಕ ಮಾಡಿಕೊಳ್ಳಬೇಕಾದ ಕಾರ್ಯಗಳು.

ಹೆಲ್ಮರ್:—ಅವೆಲ್ಲಕ್ಕಿಂತ ಮುಂಚೆ ನೀನು ಒಬ್ಬನ ಹೆಂಡತಿ ಮತ್ತು ಮಕ್ಕಳ ತಾಯಿಯೆಂದು ಗೊತ್ತಿಲ್ಲವೆ?

ನೋರಾ:—ಇನ್ನುಮೇಲೆ ಯಾವುದನ್ನೂ ನಂಬುವುದಿಲ್ಲ. ನನಗೊಂದೂ ಬೇಡ. ಪ್ರಥಮತಃ ನಾನು ಮನುಷ್ಯಜಾತಿಗೆ ಸೇರಿದ ಒಂದು ಪ್ರಾಣಿ; ನನಗೆ ಕೂಡ ಊಹಾಪೋಹ ಜ್ಞಾನವಿದೆ—ಎಲ್ಲರಿಗೂ ಇರುವಂತೆ, ನಿನಗಿರುವಂತೆ ನನಗೂ ಇದೆ—ಎಲ್ಲರ ಹಾಗೂ ನಾನೂ ಕೂಡ ವಿವೇಚನಾ ಶಕ್ತಿಯುಳ್ಳವಳಂತೆ ಇರಬೇಕೆಂದು ನನಗೆ ಆಶೆ. ವಿವೇಚನೆ ಇಲ್ಲದಿದ್ದರೂ ಅದನ್ನು ಸಂಪಾದಿಸಬೇಕು! ನನಗೆ ಗೊತ್ತು ತೊರ್ವಾಲ್ಡ್—ಪ್ರಪಂಚದಲ್ಲಿ ಎಲ್ಲರೂ ನೀನು ಸರಿಯೆಂದು ಹೇಳುತ್ತಾರೆ. ಪುಸ್ತಕಗಳಲ್ಲಿ ಕೂಡ ಹಾಗೆಯೇ ಬರೆದಿರುತ್ತೆ. ಆದರೆ ಜನರೇನಾಡುತ್ತಾರೋ, ಪುಸ್ತಕದಲ್ಲೇನು ಬರೆದಿವೆಯೋ ಅದನ್ನು ಲೆಕ್ಕಿಸುವುದಕ್ಕೆ ನನಗೆ ಸಮಯವಿಲ್ಲ. ನಾನು ಸ್ವಂತ ಅನುಭವದಿಂದ ಎಲ್ಲವನ್ನೂ ತಿಳಿಯಬೇಕಾಗಿದೆ.

ಹೆಲ್ಮರ್:—ನಿನ್ನ ಸ್ಥಳವು ನಿನ್ನ ಮನೆಯಲ್ಲಿ-ಅಲ್ಲವೆ? ನಿನ್ನ ಕಷ್ಟ ಕಾಲದಲ್ಲಿ ದಾರಿ ತೋರಿಸುವವನು, ಮನೆಯಲ್ಲಿ ಒಬ್ಬನಿಲ್ಲವೆ? ನಿನಗೆ ಯಾರೂ ದೇವರಿಲ್ಲವೆ?

ನೋರಾ:—ದೈವಭಕ್ತಿಯೇನೋ; ಮತ ಎಂದರೇನೊ ನನಗೊಂದೂ ತಿಳಿಯುವುದಿಲ್ಲ.

ಹೆಲ್ಮರ್:—ನಿನ್ನ ಮಾತಿಗೇನರ್ಥ ?

ನೋರಾ:—ಪಾದ್ರಿಯು ಹೇಳಿದ್ದಲ್ಲದೆ ಬೇರೆ ಈ ವಿಷಯಗಳಲ್ಲಿ ನನಗೇನೂ ಗೊತ್ತಿಲ್ಲ. ಅವನು ಮತವು ಇದು ; ಮತವೆಂದರೆ ಅದು ; ಇತ್ಯಾದಿ ಏನೇನೋ ಹೇಳಿದನು. ಈ ಸ್ಥಾವರ ಪ್ರಪಂಚಜ್ಞಾನವನ್ನೆಲ್ಲಾ ಮರೆತು ಒಬ್ಬಂಟಿಗಳಾಗಿದ್ದಾಗ್ಗೆ ಇವುಗಳನ್ನೆಲ್ಲಾ ಯೋಚಿಸುವೆನು.

ಹೆಲ್ಮರ್:—ಇವೆಲ್ಲಾ ಪ್ರಾಯದ ಹುಡುಗಿಗೆ ತಕ್ಕದಲ್ಲ ! ಮತಾಚಾರಗಳು ನಿನಗೆ ಸಿದ್ಧಿಸದೇ ಹೋದರೆ ನಾನು ನಿನ್ನ ಚಿತ್ತ ವಿಕಾಸವನ್ನು ಮಾಡುತ್ತೇನೆ. ನಿನಗೆ ಧರ್ಮಬುದ್ಧಿಯಾದರೂ ಸ್ವಲ್ಪವಿದೆಯೆ ? ಅಥವಾ—? ನಿಜವಾಗಿ ಉತ್ತರ ಕೊಡು—ಇಲ್ಲವೆ ?

ನೋರಾ:—ನಿಜವಾಗಿ ಹೇಳುತ್ತೇನೆ ಕೇಳು, ತೊರ್ವಾಲ್ಡ್—ಅದಕ್ಕೆ ಉತ್ತರ ಕೊಡುವುದು ಕಷ್ಟ. ನಾನು ಹೇಳಲಾರೆ. ಶಂಕೆಯೇನೋ ಮನಸ್ಸಿನ ತುಂಬಾ ಇದೆ ! ನಾವಿಬ್ಬರೂ ಒಂದೇ ವಿಷಯದಲ್ಲಿ ಬೇರೆಬೇರೆ ತರಹಾ ಯೋಚಿಸುತ್ತೇವೆ. ನಾನು ಎಲ್ಲವನ್ನೂ ಕಲಿತುಕೊಳ್ಳುತ್ತಿದ್ದೇನೆ. ಶಾಸನಗಳು ಕೂಡ ನಾನು ತಿಳಿದುಕೊಂಡಿದ್ದದ್ದೇ ಒಂದು—ಇರುವುದೇ ಒಂದು. ಶಾಸನಗಳು ಸರಿಯೆಂದು ಮಾತ್ರ ನಾನು ನಂಬಲಾರೆ ! ಈ ಶಾಸನಗಳ ಪ್ರಕಾರ ಕಷ್ಟಬಂದ ಕಾಲದಲ್ಲಿ ಮರಣೋನ್ಮುಖನಾದ ಹುಟ್ಟಿಸಿದ ಅಪ್ಪನನ್ನೂ ರುಗ್ಣನಾದಪ್ಕೈಹಿಡಿದ ಗಂಡನನ್ನೂ ರಕ್ಷಿಸುವುದು ತಪ್ಪು ! ಗಂಡನನ್ನು ಬದುಕಿಸಿಕೊಳ್ಳುವುದು ಹೆಂಗಸಿಗೆ ತಪ್ಪೆ ? ಇಂಥಾ ಶಾಸನಗಳನ್ನು ನಂಬಲಾರೆ. ಒಬ್ಬರೂ ನಂಬಕೂಡದು.

ಹೆಲ್ಮರ್:—ಮಗುವಿನಂತೆ ಮಾತಾಡುತ್ತೀಯೆ. ಪ್ರಪಂಚದ ವ್ಯವಹಾರಜ್ಞಾನ ಸ್ವಲ್ಪವೂ ಇಲ್ಲ.

ನೋರಾ:—ಇಲ್ಲ, ವ್ಯವಹಾರಜ್ಞಾನ ನನಗಿಲ್ಲ ! ಈಗ ಪ್ರಯತ್ನಮಾಡಿ ಪರ್ಯಾಲೋಚಿಸಿ ನಿಮ್ಮ ಪ್ರಪಂಚ ಸರಿಯೋ ಅಥವಾ ತಂದೆ

ಯನ್ನು ಕಾಪಾಡುವ, ಗಂಡನನ್ನು ಉಳಿಸುವ ನಾನು ಸರಿಯೊ ಎಂಬುದನ್ನು ಕಂಡುಹಿಡಿಯುತ್ತೇನೆ.

ಹೆಲ್ಮರ್:—ನೋರಾ, ನೀನು ಸ್ವಸ್ಥವಾಗಿಲ್ಲವಾಗಿರುವಂತಿದೆ. ಮತ್ತು ಸ್ಮರಣೆತಪ್ಪಿ ಮಾತನಾಡುತ್ತಿರುವೆ. ನಿನ್ನ ಮನಸ್ಸು ನಿನ್ನ ಸ್ವಾಧೀನದಲ್ಲಿರುವಂತಿಲ್ಲ.

ನೋರಾ:—ಈ ಪೊತ್ತಿನಷ್ಟು ಸ್ವಚ್ಛವಾಗಿ ನನ್ನ ಮನಸ್ಸು ಯಾವೊತ್ತೂ ಇರಲಿಲ್ಲ. ಈ ಪೊತ್ತು ಎಲ್ಲವನ್ನೂ ತಿಳಿಮನಸ್ಸಿನಿಂದ, ಸುವ್ಯವಸ್ಥೆಯಿಂದ ನೋಡುತ್ತೇನೆ.

ಹೆಲ್ಮರ್:—ಈ ಸ್ವಚ್ಛ ಮನಸ್ಸಿನಿಂದಲೇ ನಿನ್ನ ಗಂಡನನ್ನೂ ಮತ್ತು ನಿನ್ನ ಮಕ್ಕಳನ್ನೂ ತೊರೆದುಬಿಟ್ಟು ಹೋಗುತ್ತೀಯಾ?

ನೋರಾ:—ಹೌದು, ಅದು ನಿಜ.

ಹೆಲ್ಮರ್:—ಹಾಗಾದರೆ ಅದರ ಅರ್ಥ ಒಂದೇ ಇರಬೇಕು!

ನೋರಾ:— ಅದೇನದು?

ಹೆಲ್ಮರ್:—ಇನ್ನುಮೇಲೆ ನನ್ನಲ್ಲಿ ಪ್ರೀತಿಯಿಲ್ಲವೆಂದು!

ನೋರಾ:—ಪ್ರೀತಿಯಿಲ್ಲ, ನೀನು ಹೇಳಿದ್ದು ಸರಿ - - - ನಿಜ!

ಹೆಲ್ಮರ್:—ನೋರಾ! ಹಾಗೆ ಹೇಳಲು ನಿನಗೆ ಬಾಯಿಬಂತೆ?

ನೋರಾ:—ಹಾಗೆ ಹೇಳಲು ಮನಸ್ಸಿಗೇನೋ ಸಂಕೋಚವಾಗುತ್ತೆ ತೊರ್ವಾಲ್ಡ್. ನೀನು ಯಾವಾಗಲೂ ನನ್ನಲ್ಲಿ ದಯೆಯನ್ನೇ ತೋರಿಸಿರುವೆ. ಆದರೆ ನನ್ನ ಯತ್ನವೇನೂ ಇಲ್ಲ! ನಿನ್ನ ಮೇಲಿನ ಪ್ರೀತಿ ಮಾಯವಾಗಿ ಹೋಯಿತು ತೊರ್ವಾಲ್ಡ್.

ಹೆಲ್ಮರ್:—(ಸಮಾಧಾನವನ್ನು ಪುನಃ ತಾಳಿ) ನಿನ್ನ ಪ್ರೀತಿಯನ್ನು ಕಳೆದುಕೊಳ್ಳಲು ನಾನು ಮಾಡಿದ ಅಪರಾಧವೇನು?

ನೋರಾ:—ಅಪರಾಧವೆ? ಹೇಳುತ್ತೇನೆ! ಅತ್ಯದ್ಭುತವಾದ ಒಂದು ವಿಷಂಯವು ಈ ರಾತ್ರಿ ನಡೆಯಬೇಕಾಗಿತ್ತು; ಅದು ನಡೆಯ

ಲಿಲ್ಲ. ಆದರಿಂದ ತಿಳಿಯಿತು ನನಗೆ--ನಾನು ಯೋಚಿಸಿ ಕೊಂಡಿದ್ದಂಥಾ ಮನುಷ್ಯನು ನೀನಲ್ಲವೆಂದು!

ಹೆಲ್ಮರ್:—ಸ್ವಲ್ಪ ವಿಶದವಾಗಿ ಹೇಳು. ನಿನ್ನ ಮಾತು ಅರ್ಥವಾಗುವುದಿಲ್ಲ.

ನೋರಾ:—ನಾನು ತಾಳ್ಮೆಯಿಂದ ಎಂಟು ವರ್ಷಗಳಿಂದಲೂ ಕಾದುಕೊಂಡಿದ್ದೇನೆ. ಪ್ರತಿದಿನವೂ ಅತ್ಯದ್ಭುತವಾದ ವಿಷಯಗಳು ಸಂಭವಿಸುವುದಿಲ್ಲವೆಂದು ನನಗೆ ಚೆನ್ನಾಗಿ ಗೊತ್ತು. ಆ ಮೇಲೆ ಈ ಭಯಂಕರವಾದ ವಿಪತ್ತು ಸಂಭವಿಸಿತು; ಆದಾದ ಮೇಲೆ ಎಂದೋ ಒಂದು ದಿನ ನಾನು ನಿರೀಕ್ಷಿಸುತ್ತಿದ್ದ ಅದ್ಭುತ ವಿಷಯವು ಸಂಭವಿಸುವುದೆಂದು ದೃಢವಾದ ನಂಬಿಕೆಯನ್ನಿಟ್ಟಿದ್ದೆ. ಕ್ರಾಗ್‌ಸ್ಟಾಡಿನ ಕಾಗದವು ಬಂದಮೇಲೆ ಅವನ ಕರಾರುಗಳನ್ನೆಲ್ಲಾ ನೀನು ಒಪ್ಪಿಕೊಳ್ಳುತ್ತೀಯೆಂದು ಒಂದು ನಿಮಿಷವೂ ನಾನು ಯೋಚಿಸಿರಲಿಲ್ಲ. ನನ್ನ ಮನಸ್ಸಿನಲ್ಲಿ ಖಚಿತವಾದ ನಂಬಿಕೆ ಏನಿತ್ತು ಹೇಳಲೆ? "ಕ್ರಾಗ್‌ಸ್ಟಾಡ್ ಈ ಸಮಾಚಾರವನ್ನು ಪ್ರಪಂಚದಲ್ಲೆಲ್ಲಾ ಹರಡಬಹುದು" ಎಂಬುದಾಗಿ ಹೇಳಿದ ನಂತರ——

ಹೆಲ್ಮರ್:—ಹೌದು; ಹೇಳಿದ ನಂತರ? ನನ್ನ ಹೆಂಡತಿಯನ್ನು ಎಲ್ಲರೆದುರಿಗೂ ಹೀನಾಯಿಸಿ ಅವಮಾನ ಪಡಿಸಿದಮೇಲೆ——?

ನೋರಾ:—ಆದಾದಮೇಲೆ ತಪ್ಪನ್ನೆಲ್ಲಾ ನೀನು ವಹಿಸಿಕೊಂಡು ಎಲ್ಲರ ಮುಂದೂ "ನಾನು ತಪ್ಪಿತಸ್ಥ" ಎಂದು ಹೇಳುತ್ತೀಯೆಂದು ನನ್ನ ಸಂಪೂರ್ಣ ನಂಬಿಕೆ ಇತ್ತು.

ಹೆಲ್ಮರ್:—ನೋರಾ—!

ನೋರಾ:—ನನಗೋಸ್ಕರ ನೀನು ಮಾಡಿದ ಪರಿತ್ಯಾಗವನ್ನು ನಾನು ಒಪ್ಪುತ್ತಿರಲಿಲ್ಲವೆಂದೆ? ಇಲ್ಲ-ಎಂದಿಗೂ ಇಲ್ಲ. ಆದರೆ ಪ್ರಪಂಚದಲ್ಲಿ ನಿನ್ನ ಮಾತು—ನಿನ್ನ ಭರವಸೆಯ ಮುಂದೆ ನನ್ನ ಮಾತು ನಿಲ್ಲುತ್ತಿತ್ತೆ? ನಾನು ನಿರೀಕ್ಷಿಸುತ್ತಿದ್ದ-ಮತ್ತು ನಿರೀ

ಕ್ಷಣೆಯಲ್ಲಿ ನಡುಗುತ್ತಿದ್ದ–ಅತ್ಯದ್ಭುತವಾದ ವಿಷಯವು ಅದೇ; ಕೊನೆಯಲ್ಲಿ ಅದನ್ನು ತಪ್ಪಿಸುವುದಕ್ಕೋಸ್ಕರ ನಾನು ಆತ್ಮ ಹತ್ಯವನ್ನು ಮಾಡಿಕೊಳ್ಳಬೇಕೆಂದಿದ್ದೆ.

ಹೆಲ್ಮರ್:—ನಿನಗೋಸ್ಕರವಾಗಿ ಹಗಲೂ ರಾತ್ರಿ ಕೆಲಸಮಾಡಬಲ್ಲೆ–ಬಡತನ ದುಃಖ ಅಥವಾ ಇನ್ನೇನಾದರೂ ಕಷ್ಟಗಳು—ಎಲ್ಲವನ್ನೂ ಸಹಿಸಬಲ್ಲೆ. ಆದರೆ ತನ್ನ ಕೈಹಿಡಿದ ಹೆಂಡತಿಗೋಸ್ಕರಲೂ ಯಾವ ಗಂಡನೂ ತನ್ನ ಮಾನವನ್ನು ಕಳೆದುಕೊಳ್ಳಲಾರನು.

ನೋರಾ:—ಅಂಥಾ ಕೆಲಸವನ್ನು ತಾವು ಪ್ರೀತಿಸಿದವರಿಗೋಸ್ಕರ ಲಕ್ಷಾಂತರ ಜನ ಹೆಂಗಸರು ಮಾಡಬಲ್ಲರು.

ಹೆಲ್ಮರ್:—ನಿನ್ನ ಯೋಚನೆ ಮಾತು ಇವುಗಳೆಲ್ಲಾ ಬುದ್ಧಿಯಿಲ್ಲದ ಹುಡುಗರಂತೆ.

ನೋರಾ:—ಇರಬಹುದು. ನಿನ್ನ ಮಾತು–ನಿನ್ನ ಯೋಚನೆ ನಾನು ಒಪ್ಪುವಂಥಾ ಗಂಡನಿಗೆ ಸೇರಿದಂಥಾವುಗಳಲ್ಲ. ನಿನ್ನ ಅಂಜಿಕೆ ಹೋದಮೇಲೆ—ನನ್ನಗತಿ ಯೇನಾಗುತ್ತೋ ಎಂಬ ಅಂಜಿಕೆಯಿಲ್ಲ! ನಿನಗೆ ಏನಾಗುತ್ತೋ ನಿನ್ನ ಮಾನ ಹೋಗಿಬಿಡುತ್ತದೆಯಲ್ಲ ಎಂಬ ಅಂಜಿಕೆ——ಎಲ್ಲವೂ ಸರಿಹೋದಮೇಲೆ, ನಿನಗೆಲ್ಲವೂ ಪೂರ್ವದಲ್ಲಿದ್ದಂತೆಯೇ ಆಗಿಬಿಡಬೇಕು. ಪೂರ್ವದಂತೆಯೇ ನಾನು ನಿನ್ನ ಪುಟ್ಟಪಕ್ಷಿ! ನಿನ್ನ ಅಳಿಲು ಕುಂಚ! ನಿನ್ನ ಪ್ರೀತಿ ಬೊಂಬೆ! ಇನ್ನುಮುಂದೆ ಬೊಂಬೆ ಒಡೆದು ಚೂರುಚೂರಾಗದ ಹಾಗೆ ಬಹಳ ಹುಷಾರಿಂದ ಬಹಳ ಪ್ರೀತಿಯಿಂದ ನೋಡಿಕೊಂಡಿರುತ್ತಿ! ನಾನೇನೂ ಯೋಚಿಸಲೇ ಕೂಡದು. ಯಾಕಂದರೆ ನನ್ನ ಯೋಚನೆ ನನ್ನ ಮನೋಧರ್ಮ ಎಲ್ಲವೂ ನೀನೆ. (ಎದ್ದುನಿಂತುಕೊಂಡು) ತೊರ್ವಾಲ್ಡ್ ಇವುಗಳೆಲ್ಲಾ ಈ ರಾತ್ರಿ ನಡೆದಾಗ್ಗೆ ನಾನು ಎಂಟು ವರ್ಷಗಳಿಂದ ಯಾವನೋ ಗುರುತಿಲ್ಲದವನನ್ನು ಕೂಡಿ ಅವನಿಗೆ

ಮೂರು ಮಕ್ಕಳನ್ನು ಹೆತ್ತೆನಲ್ಲಾ! ಎಂದು ವ್ಯಥೆಯಾಯಿತು- ಅಯ್ಯೋ ಈಗ ಆದನ್ನು ಯೋಚಿಸುವುದೂ ದುಸ್ಸಹವಾಗು ವುದು. ಮೈ ಪರಚಿಕೊಂಡು ಚೂರುಚೂರು ಮಾಡಿಕೊಳ್ಳಲಿ ಎನ್ನಿಸುವುದು,

ಹೆಲ್ಮರ್:—(ದುಃಖದಿಂದ) ತಿಳಿಯಿತು— ಈಗ ತಿಳಿಯಿತು— ನಮ್ಮಿಬ್ಬರ ನಡುವೆ ಅಗಾಧವಾದ ಅಂತರಾಳವು ಪ್ರಾಪ್ತಿಯಾಗಿದೆ- ಹಾಗಿಲ್ಲವೆಂದು ಹೇಳಲಾಗುವುದಿಲ್ಲ. ಆದರೆ ನೋರಾ ಆ ಅಂತರಾಳವನ್ನು ಮುಚ್ಚಿಬಿಡುವುದಕ್ಕಾಗುವುದಿಲ್ಲವೆ?

ನೋರಾ:—ಈಗಿನ ಸಂದರ್ಭದಲ್ಲಿ ನಿನಗೆ ನಾನು ಹೆಂಡತಿಯಲ್ಲ.

ಹೆಲ್ಮರ್:—ನಾನೂ ಕೂಡ ಬದಲಾಯಿಸಿ ಬೇರೆಯವನಾಗಬಲ್ಲೆ.

ನೋರಾ:—ಇರಬಹುದು—ನಿನ್ನ ಬೊಂಬೆ ನಿನ್ನನ್ನು ಬಿಟ್ಟು ಹೋದಮೇಲೆ.

ಹೆಲ್ಮರ್:—ಆದರೆ ಅಗಲುವುದು! ನಿನ್ನನ್ನು ಅಗಲುವುದು! ಇಲ್ಲ ಇಲ್ಲ! ನೋರಾ, ನಿನ್ನ ಮನೋಭಾವನೆಯೇ ನನಗೆ ಅರ್ಥ ವಾಗುವುದಿಲ್ಲ.

ನೋರಾ:—(ಬಲಗಡೆ ಹೋಗಿ) ನನ್ನ ಮನೋಭಾವನೆ ನಿನಗೆ ಅರ್ಥ ವಾಗದೇ ಇರುವ ಕಾರಣಕ್ಕೋಸ್ಕರವೇ ನಾನು ಹೋಗಬೇಕಾ ಗಿದೆ. (ಮೇಲಂಗಿ-ಟೋಪಿ-ಒಂದು ಕೈಚೀಲ ಹಿಡಿದುಕೊಂಡು ಬರುವಳು)

ಹೆಲ್ಮರ್:—ನೋರಾ, ನೋರಾ, ಈಗ ಬೇಡ. ಬೆಳಗಿನ ತನಕ ತಡೆ.

ನೋರಾ:—(ಮೇಲಂಗಿಯನ್ನು ಧರಿಸಿ) ಯಾವನೋ ಪರಪುರುಷನ ಚಿಕ್ಕಮನೆಯಲ್ಲಿ ಮಲಗಿ ರಾತ್ರಿಯನ್ನು ಕಳೆಯಲಾರೆ!

ಹೆಲ್ಮರ್:—ನಾವು ಸಹೋದರ ಸಹೋದರಿಯರಂತೆ ವಾಸವಾಗಿರ ಬಾರದೆ?

ನೋರಾ:—(ಟೋಪಿಯನ್ನು ಹಾಕಿಕೊಂಡು) ಹಾಗೆ ಬಹಳ ಕಾಲವಿರಲಾಗುವುದಿಲ್ಲವೆಂದು ನಿನಗೇ ಗೊತ್ತು (ಶಾಲನ್ನು ಸುತ್ತಿಕೊಳ್ಳುವಳು) ಗುಡ್ ಬೈ ತೊರ್ವಾಲ್ಡ್, ಮಕ್ಕಳನ್ನು ನೋಡುವುದಿಲ್ಲ. ಈಗಿನ ಅವಸ್ಥೆಯಲ್ಲಿ ನನ್ನಿಂದೇನೂ ಅವುಗಳಿಗೆ ಉಪಯೋಗವಿಲ್ಲ.

ಹೆಲ್ಮರ್:—ಆದರೆ ಮುಂದೆ ಎಂದಾದರೂ—? ನೋರಾ ಎಂದಾದರೂ—?

ನೋರಾ:—ನಾನು ಹೇಗೆ ಹೇಳಲಿ ? ಮುಂದೆ ನನಗೇನಾಗುತ್ತೋ ತಿಳಿಯದು.

ಹೆಲ್ಮರ್:—ಏನು ಬೇಕಾದರೂ ಆಗಲಿ, ನೀನು ನನ್ನ ಹೆಂಡತಿ, ಯಾವಾಗಲೂ.

ನೋರಾ:—ಇಲ್ಲಿ ನೋಡು ತೊರ್ವಾಲ್ಡ್, ಈಗ ನಾನು ಮಾಡುತ್ತಿರುವಂತೆ ಹೆಂಡತಿಯು ತಾನಾಗಿಯೇ ಗಂಡನನ್ನು ಬಿಟ್ಟರೆ ಅವಳಿಗೆ ಯಾವ ಜೀವನಾಂಶದ ಹಕ್ಕೂ ಇಲ್ಲವೆಂದು ಕೇಳಿದ್ದೇನೆ. ಅದು ಹೇಗಾದರೂ ಇರಲಿ, ಅವುಗಳಿಂದೆಲ್ಲಾ ನಿನ್ನನ್ನು ಬಿಡುಗಡೆ ಮಾಡಿದ್ದೇನೆ. ನನಗೂ ನಿನಗೂ ಏನೂ ಋಣವಿಲ್ಲ. ಎಲ್ಲಾ ತೀರಿತು. ಇಬ್ಬರೂ ನಿರಾತಂಕವಾಗಿ ಸ್ವತಂತ್ರದಿಂದಿರಬೇಕು. ಇಗೋ ನಿನ್ನ ಉಂಗುರವನ್ನು. ವಾಪಸ್ಸು ತೆಗೆದುಕೊ ನನ್ನ ಉಂಗುರವನ್ನು ಕೊಡು.

ಹೆಲ್ಮರ್:—ಅದೂ ಕೂಡ ಆಗಿಬಿಡಬೇಕೆ ?

ನೊರಾ:—ಅದೂ ಕೂಡ !

ಹೆಲ್ಮರ್:—ತಗೋ.

ನೋರಾ:—ಸರಿ, ಈಗೆಲ್ಲಾ ಮುಗಿಯಿತು. ಬೀಗದ ಕೈಗಳು ಇಲ್ಲಿವೆ. ಮನೆಯ ವಿಚಾರಗಳೆಲ್ಲಾ ಆಳುಗಳಿಗೆ ನನಗಿಂತಲೂ ಚೆನ್ನಾಗಿ

ತಿಳಿದಿದೆ. ಏನೂ ಯೋಚನೆಮಾಡಬೇಡ. ನಾಳೆ ಕ್ರಿಸ್ಟೀನ್ ಇಲ್ಲಿ ಬಂದು ನನ್ನ ಸ್ವಂತ ಸಾಮಾನುಗಳನ್ನು ಗಂಟು ಕಟ್ಟಿ ನಾನಿರುವ ಸ್ಥಳಕ್ಕೆ ಕಳುಹಿಸುತ್ತಾಳೆ.

ಹೆಲ್ಮರ್:—ಎಲ್ಲಾ ಮುಗಿಯಿತು—ಎಲ್ಲಾ ಮುಗಿಯಿತು. ನೋರಾ ನನ್ನ ಯೋಚನೆಯೇ ಇರುವುದಿಲ್ಲವೆ ನಿನಗೆ?

ನೋರಾ:—ನೀನು, ಈ ಮನೆ-ಮಕ್ಕಳು ಇವುಗಳನ್ನೆಲ್ಲಾ ಯೋಚಿಸದೆ ಇರುವುದಕ್ಕಾಗುತ್ತದೆಯೆ?

ಹೆಲ್ಮರ್:—ನಾನು ನಿನಗೆ ಕಾಗದ ಬರೆಯಬಹುದೆ?

ನೋರಾ:—ಕೂಡದು—ಖಂಡಿತ ಕೂಡದು.

ಹೆಲ್ಮರ್:—ಏನನ್ನಾದರೂ ಕಳುಹಿಸಿ ಕೊಡಬಹುದೆ?

ನೋರಾ:—ಒಂದೂ ಕೂಡದು—ಖಂಡಿತ.

ಹೆಲ್ಮರ್:—ನೀನು ಕಷ್ಟಕ್ಕೆ ಸಿಕ್ಕಿಕೊಂಡರೆ ನಾನು ಸಹಾಯ ಮಾಡಲು ಒಪ್ಪು.

ನೋರಾ:—ಪರಪುರುಷನಿಂದ ಏನನ್ನೂ ಸ್ವೀಕರಿಸುವುದಿಲ್ಲ.

ಹೆಲ್ಮರ್:—ಪರಪುರುಷನಲ್ಲದೆ ನಾನು ಮತ್ತೇನೂ ಆಗಲಾರೆನೆ?

ನೋರಾ:—(ಚೀಲವನ್ನು ಕೈಲಿ ಹಿಡಿದುಕೊಂಡು) ಹಾಗೆ ಆಗಬೇಕಾದರೆ ನಾವಿಬ್ಬರೂ ಎಷ್ಟು ಬದಲಾಯಿಸಬೇಕು, ಗೊತ್ತೆ?— ತೊರ್ವಾಲ್ಡ್—ಅದ್ಭುತ ವಿಷಯಗಳು ಸಂಭವಿಸುತ್ತವೆಯೆಂಬುದನ್ನು ಇನ್ನು ಮೇಲೆ ನಂಬಲಾರೆ.

ಹೆಲ್ಮರ್:—ನಾನು ನಂಬುತ್ತೇನೆ ಹೇಳು-ಅಷ್ಟು ಬದಲಾಯಿಸಿದರೆ—?

ನೋರಾ:—ನಮ್ಮಿಬ್ಬರಿಗೂ ನಿಜವಾದ ದಾಂಪತ್ಯ ಉಂಟಾಗುವುದು. ಗುಡ್ ಬೈ. (ಹಜಾರದಿಂದ ಹೊರಟು ಹೋಗುವಳು)

ಹೆಲ್ಮರ್:—(ಕುರ್ಚಿಯಮೇಲೆ ಕುಸಿದುಬಿದ್ದು ಮುಖವನ್ನು ಮುಚ್ಚಿಕೊಂಡು) ನೋರಾ, ನೋರಾ, (ಸುತ್ತಲೂ ನೋಡುವನು ಹಾಗೆಯೇ ಏಳುವನು) ಬರಿಯ ಮನೆ. ಅವಳು ಹೊರಟುಹೋದಳು. (ಹಾಗೆಯೇ ಒಂದು ಒಳ್ಳೇ ಯೋಚನೆ ಹೊಳೆಯುತ್ತೆ) ಅತ್ಯದ್ಭುತವಾದ ವಿಷಯ—? (ಬಾಗಿಲು ಹಾಕಿಕೊಂಡ ಶಬ್ದವು ಕೆಳಗಿನಿಂದ ಕೇಳಿಬರುವುದು.)

(ಮೂರನೆಯ ಅಂಕವು ಮುಗಿದುದು)

